# ಚಂದಮಾಮ

ಜುಲೈ 1979

★

ಈ ಸಂಚಿಕೆಯಲ್ಲಿ



★

ಬಿಡಿ ಪ್ರತಿ ರೂ. ೧-೨೫
ವಾರ್ಷಿಕ ಚಂದಾ ರೂ. ೧೫-೦೦

# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'

ಸಂಚಾಲಕರು : ನಾಗಿರೆಡ್ಡಿ

---

ನಮ್ಮದು ಭಾರತದೇಶ. ಇಲ್ಲಿಯ ಪ್ರಜೆಗಳಿಗೆ ಭಾರತೀಯರೆಂದು ಹೇಳುತ್ತಾರಷ್ಟೇ ? ಭರತನಿಂದ ಭಾರತದೇಶವೆಂಬ ಹೆಸರು ಬಂತೆಂದು ಸಾಧಾರಣವಾಗಿ ಎಲ್ಲರಿಗೂ ಗೊತ್ತಿದೆ. ಆದರೆ ಅದು ಒಬ್ಬ ಭರತನಿಂದ ಬಂದುದಲ್ಲವೆಂದೂ, ಅನೇಕ ಭರತರ ಬಾಲ್ಯಕಾಲದ ಪ್ರಭಾವ ಪ್ರತಿಭೆಗಳಿಂದ ಬಂದುದೆಂದೂ, ಈ ಸಂಚಿಕೆಯ ಪುರಾಣಬಾಲರ ವರಿಸೆಯಲ್ಲಿ ಬರುವ "ಭರತ" ರಿಂದ ತಿಳಿಯಬಹುದು. ಭರತನಾಮವು ಭಾರತೀಯರಾದ ಬಾಲರಿಗೆಲ್ಲಾ ಹೆಮ್ಮೆಯ ನಾಮವಾಗಿದೆ.

## ಅಮರವಾಣಿ

ಸಾಧೋಃ ಪ್ರಕೋಪಿತಸ್ಯಾಪಿ
ಮನೋ ನಾಯಾತಿ ವಿಕ್ರಿಯಾಮ್
ನ ಹಿ ತಾಪಯಿತುಂ ಶಕ್ಯಂ
ಸಮುದ್ರಾಂಭಃ ತೃಣೋಲ್ಕಯಾ

ಸಾಧುಗಳಿಗೆ ಎಷ್ಟೇ ಕೋಪವನ್ನು ಬರಿಸಿದರೂ ವಿಕಾರವಾಗದು. ಹುಲ್ಲಿನ ಉರಿಯಿಂದ ಸಮುದ್ರದ ನೀರಿಗೆ ಬಿಸಿಹುಟ್ಟಿಸಲು ಸಾಧ್ಯವಿಲ್ಲವಷ್ಟೆ.

---

ಸಂಪುಟ : ೬೩ ಜುಲೈ '೭೯ ಸಂಚಿಕೆ : ೧

ಬಿಡಿ ಪ್ರತಿ ರೂ. ೧-೨೫ :: ವಾರ್ಷಿಕ ಚಂದಾ ರೂ. ೧೫-೦೦






**ವೈ. ಚಂದ್ರಶೇಖರ ರಾವ್, ರೂರ್ಕೇಲಾ (ಒರಿಸ್ಸಾ)**

**ಪ್ರ: ಅಗಸ್ತ್ಯನ ಕಥೆಯಲ್ಲಿ ಇಲ್ವಲನು ವಾತಾಪಿ ಎಂಬವನನ್ನು ಮೇಕೆಯಾಗಿ ಮಾರ್ಪಡಿಸಿ ಅಡಿಗೆ ಮಾಡಿ ಅತಿಥಿಗಳಾಗಿಬಂದ ಬ್ರಾಹ್ಮಣನಿಗೆ ಬಡಿಸಿದಂತೆ ಕಥೆಯಲ್ಲಿದೆ. ಅಂದರೆ ಪುರಾಣದ ಬ್ರಾಹ್ಮಣರು ಮೇಕೆಯ ಮಾಂಸವನ್ನು ತಿನ್ನುವವರೆಂದೇ ಆಯಿತಲ್ಲವೆ ?**

ಉ: ಹೌದು. ವೇದ ಕಾಲದ ಆರ್ಯರು ೧೩. ಬಗೆಯ ಪ್ರಾಣಿಗಳನ್ನು ಯಜ್ಞ ಪಶುಗಳಾಗಿ ಉಪಯೋಗಿಸುವರಂತೆ. ಅವುಗಳಲ್ಲಿ ಗೋವುಗಳೂ ಇವೆ. ಆದರೆ ವೇದಯುಗ ಮುಗಿಯುವ ಮೊದಲೇ ಗೋವಧೆಯ ಮೇಲೆ ನಿಷೇಧ ಬಂದಿತು. ಬ್ರಾಹ್ಮಣರು ಮಾಂಸಾಹಾರವನ್ನು ಬಿಟ್ಟು ಬಿಡಲು ಜೈನ ಮತವು ಕಾರಣವಾಗಿರಬೇಕು. ಬೌದ್ಧರು ಅಹಿಂಸಾವಾದಿಗಳೇ ಆದರೂ ಮಾಂಸಭಕ್ಷಣವನ್ನು ವಿಸರ್ಜಿಸಲಿಲ್ಲ. ಹಸಿವೆಯನ್ನು ತಾಳಲಾಗದ ಬ್ರಾಹ್ಮಣಯುವಕರು ಆಕಳನ್ನು ಕೊಂದು ತಿಂದ ಕಥೆ ಕಥಾಸರಿತ್ಸಾಗರದಲ್ಲಿದೆ.

**ಟಿ. ಎಲ್. ಶ್ರೀನಿವಾಸ್, ವರಂಗಲ್ಲು (ಆಂಧ್ರ)**

**ಪ್ರ: ರಾಮಾಯಣ, ಮಹಾಭಾರತ ಪುರಾಣ ಕಥೆಗಳು ಕವಿಗಳ ಕಲ್ಪನೆಯೋ ನಿಜವಾಗಿ ನಡೆದುವೋ? ಒಂದು ವೇಳೆ ನಿಜವಾಗಿ ನಡೆದಿದ್ದರೆ ಎರಡರಲ್ಲಿ ಯಾವುದು ಮೊದಲು ನಡೆಯಿತು ?**

ಉ: ರಾಮಾಯಣ, ಭಾರತ ಕಥೆಗಳು ಆದಿಯಲ್ಲಿ ವೀರರ ಕಥೆಗಳೆಂಬುದಾಗಿ ಗಾನರೂಪದಲ್ಲಿದ್ದು, ಆ ಕಥೆಗಳನ್ನು ಜನರು ಹೇಳಿಕೊಳ್ಳುತ್ತ, "ದಂತ ಪುರಾದ" ಗಳಾಗಿದ್ದು ಅನೇಕ ಕಲ್ಪನೆಗಳಿಗೆ ಗುರಿಯಾಗಿ, ಬೇರೆ ಬೇರೆ ಪ್ರಾಂತಗಳಲ್ಲಿ ಬೇರೆ ಬೇರೆ ವಿವರಗಳನ್ನು ಒಳಗೊಂಡುವೆಂದೂ. ತರುವಾಯ ಅವುಗಳಿಗೆ ಲಿಖಿತ ರೂಪ ಬಂದಿತೆಂದೂ ಸಂಶೋಧಕರು ಹೇಳುತ್ತಾರೆ. ಒಂದೊಂದು ಪ್ರಾಂತದ ರಾಮಾಯಣವು ಒಂದೊಂದು ರೀತಿಯಾಗಿರಲಿಕ್ಕೂ, ಭಾರತದಲ್ಲಿ ಮೂಲ ಕಥೆಗೆ ಸಂಬಂಧವಿಲ್ಲದ ಅನೇಕ ಉಪಾಖ್ಯಾನಗಳು ಸೇರಲಿಕ್ಕೂ ಆ ರಚನೆಗಳಿಗೆ ಆಯಾ ಪ್ರಾಂತದ ದಂತ ಪುರಾಣಗಳು ಆಧಾರವಾಗಿದ್ದುದು ಕಾರಣವಾಗಿರಬಹುದು.

ವೀರರ ಕಥೆಗಳು ಪೂರ್ತಿ ಕಲ್ಪನೆಗಳಾಗಿರಲಾರವು. ಅವುಗಳಿಗೆ ಆಧಾರವಾಗಿ ಏನೋ ಒಂದು ವಾಸ್ತವ ಘಟನೆ ಇದ್ದೇ ಇರುತ್ತದೆ. ಅದನ್ನು ಕವಿಗಳೂ ಗಾಯಕರೂ ಕಲ್ಪನೆಗಳಿಂದ ಸುರಸಗಳಿಂದ ತುಂಬಿಸುತ್ತಾರೆ. ಸ್ವಲ್ಪಕಾಲದ ಮೇಲೆ ಅಸಲು ಕಥೆಗಿಂತಲೂ ಕಲ್ಪನೆಗಳೇ ಮುಖ್ಯವಾಗುತ್ತವೆ. ರಾಮಾಯಣದ ರಾಮನೂ, ಭಾರತದ ಕೃಷ್ಣನೂ ಅವತಾರ ಪುರುಷರಾದರು. ರಾಮಾಯಣಕ್ಕೆ ಸಂಬಂಧವಿಲ್ಲದ ರಾಮನು ಇದ್ದನೋ ಇಲ್ಲವೋ ತಿಳಿಯದು ; ಆದರೆ ಭಾರತಕ್ಕೆ ಸಂಬಂಧಿಸಿದ ಕೃಷ್ಣನು (ದೇವಕೀ ನಂದನ ವಾಸುದೇವನು) ಉಪನಿಷತ್ತುಗಳಲ್ಲಿದ್ದಾನೆ. ಹಾಗೆಯೇ ರಾಮಾಯಣದ ಸೀತೆಯ ತಂದೆಯಾಗಿ ಭಾವಿಸಲ್ಪಡುವ ಜನಕನು ಉಪನಿಷತ್ತುಗಳಲ್ಲಿದ್ದಾನೆ. ಅವನು ಸೀತೆಯ ತಂದೆಯೋ ರಾಮನಮಾವನೋ ಅಲ್ಲ. ಈ ವಿವರಗಳಿಂದ ಪುರಾಣಗಳ ಉತ್ಪತ್ತಿ ಪರಿಣಾಮಗಳನ್ನು ಊಹಿಸಬಹುದು.




೨೧

## ವಿಶ್ವಾಸದ ಮುಂಗುಸಿ

ಹಿಂದೆ ದೇವಶರ್ಮನೆಂಬೊಬ್ಬ ಬಡ ಬ್ರಾಹ್ಮಣನಿದ್ದ. ಅವನಿಗೆ ಬಹಳ ಕಾಲ ಮಕ್ಕಳಿಲ್ಲದೆ, ಕಡೆಗೆ ಒಂದು ಗಂಡು ಮಗು ಹುಟ್ಟಿತು. ಅಪೂರ್ವ ಸಂತಾನವಾಗಿ ಹುಟ್ಟಿದ ಮಗುವಿನ ಮೇಲೆ ತಾಯಿತಂದೆಯರಿಗೆ ತುಂಬಾ ಅಕ್ಕರೆ. ತಮ್ಮ ಜನ್ಮ ಸಾರ್ಥಕವಾದಂತೆ ಆತ್ಮಾನಂದ. ಶರೀರಕ್ಕೆ ಹಚ್ಚಿಕೊಂಡ ಚಂದನಲೇಪನಕ್ಕಿಂತಲೂ ಪುತ್ರಸ್ಪರ್ಶವು ತಣ್ಣಗಿರುತ್ತದಲ್ಲವೆ? ಮಗನಿಗಾಗಿ ಸೋದರರನ್ನೂ, ತಂದೆಯನ್ನೂ, ಇತರ ಸಂರಕ್ಷಕರನ್ನೂ ಸಹ ತ್ಯಜಿಸುವವರಿದ್ದಾರೆ. ಪುತ್ರ ಪ್ರೇಮದಿಂದ ಕೆಲವರ ಬುದ್ಧಿಗೆ ಮಂಕು ಕೂಡಾ ಕವಿಯುತ್ತದೆ.

ಆ ದಂಪತಿಗಳು ಮಕ್ಕಳಿಲ್ಲದ ಕಾಲದಲ್ಲಿ ಒಂದು ಮುಂಗುಸಿಯನ್ನು ಬೆಳೆಸಿಕೊಂಡಿದ್ದರು. ಅದು ಸ್ವೇಚ್ಛೆಯಾಗಿ ಮನೆಯೊಳಗೆಲ್ಲಾ ತಿರುಗಾಡುತ್ತಿದ್ದಿತು. ಅದುವರೆಗೆ ಅದನ್ನು ತಮ್ಮ ಮಗುವಿನಂತೆ ನೋಡಿಕೊಳ್ಳುತ್ತಿದ್ದ ಬ್ರಾಹ್ಮಣ ದಂಪತಿಗಳು, ಈಗ ಅದು ತಮ್ಮ ಮಗುವನ್ನು ಏನು ಮಾಡಿ ಬಿಡುತ್ತದೋ ಎಂದು ಭಯಪಡತೊಡಗಿದರು. ತಮ್ಮ ಮಗುವಿನ ಮೇಲಿರುವ ವಿಪರೀತ ಆಚ್ಚೆಯೇ ಆ ಬಗೆಯ ವಿಪರೀತ ಭಯಕ್ಕೆ ಕಾರಣವೆನ್ನಬಹುದು. ಈ ಪರಿಸ್ಥಿತಿಯಲ್ಲಿ ಒಂದು ದಿನ ಬ್ರಾಹ್ಮಣನ ಹೆಂಡತಿ ಸ್ನಾನಮಾಡಲಿಕ್ಕಾಗಿ ನದಿಗೆ ಹೋದಳು. ಆಗ ಅವಳು ತನ್ನ ಗಂಡನೊಂದಿಗೆ, "ನಾನು ಸ್ನಾನಕ್ಕೆ ಹೋಗುತ್ತೇನೆ. ಮಗುವನ್ನು ಜಾಗ್ರತೆಯಾಗಿ ನೋಡುತ್ತಿರಿ." ಎಂದು ಎಚ್ಚರಿಕೆ ಹೇಳಿದಳು.

ಅವಳು ಹೋದ ಸ್ವಲ್ಪ ಹೊತ್ತಿಗೆ ರಾಣಿಯ ಪರಿಚಾರಿಕೆಯೊಬ್ಬಳು ಬ್ರಾಹ್ಮಣನ ಬಳಿಗೆಬಂದು "ರಾಣಿಯವರು ಲಕ್ಷ್ಮೀ ಪೂಜೆ ಮಾಡಿ. ದಕ್ಷಿಣೆ ತಾಂಬೂಲ ಪಡೆದುಕೊಳ್ಳಲು ನಿಮ್ಮನ್ನು ಕರೆಯುತ್ತಾರೆ. ಈಗಲೇ ಬರಬೇಕಂತೆ. ಬೇಗ ಬನ್ನಿ" ಎಂದಳು.

ರಾಣಿಯವರಿಂದ ಬರುವ ದಾನ ಧರ್ಮಗಳ ಮೇಲಿನ ಆಶೆಯಿಂದ ಬ್ರಾಹ್ಮಣನು ಮಗುವನ್ನೂ ಮನೆಯನ್ನೂ ಮುಂಗುಸಿಯ ರಕ್ಷಣೆಯಲ್ಲಿ ಬಿಟ್ಟು, ಅರಮನೆಯ ಕಡೆಗೆ ಹೊರಟು ಹೋದನು. ಅವನು ಹೊರಟು ಹೋದ ಸ್ವಲ್ಪ ಹೊತ್ತಿಗೆ



ಗೋಡೆಯಲ್ಲಿದ್ದ ಒಂದು ಬಿರುಕಿನೆಡೆಯಿಂದ ಒಂದು ಹಾವು ಹೊರಬಿದ್ದು ಮಗುವಿನ ಕಡೆಗೆ ಓಡುತ್ತಾ ಬರತೊಡಗಿತು.

ಸಹಜವಾಗಿಯೇ ಮುಂಗುಸಿಗೂ ಹಾವಿಗೂ ವೈರವಿದೆಯಷ್ಟೇ? ಅದೀಗ ಎಳೆ ಮಗುವಿನ ಕಡೆಗೇ ಬರುವುದನ್ನು ನೋಡಿ, ಮುಂಗುಸಿ ಹಾವಿನ ಮೇಲೆ ಬಿದ್ದು ಹೋರಾಡಿ ಅದನ್ನು ಕೊಂದು ತುಂಡು ತುಂಡು ಮಾಡಿ ಹಾಕಿತು.

ಆಗ ದೂರದಲ್ಲಿ ಬ್ರಾಹ್ಮಣನು ಅರಮನೆಯಿಂದ ತಿರುಗಿ ಬರುವುದನ್ನು ಆ ಮುಂಗುಸಿ ನೋಡಿತು. ದುಷ್ಟಹಾವನ್ನು ಕೊಂದು ವಿಜಯ ಸಂಪಾದಿಸಿದೆನೆಂಬ ಉಬ್ಬಿನಲ್ಲಿ, ರಕ್ತ ಸಿಕ್ತವಾದ ಬಾಯಿಯೊಂದಿಗೆ ಮುಂಗುಸಿ ಬ್ರಾಹ್ಮಣನ ಇದಿರಾಗಿ ಹೋಯಿತು. ಬ್ರಾಹ್ಮಣನು ಅದರ ಬಾಯಿಯಲ್ಲಿದ್ದ ರಕ್ತವನ್ನು ನೋಡಿ, ಅದು ತಮ್ಮ ಮಗುವನ್ನು ಕೊಂದು ಹಾಕಿತೆಂದುಕೊಂಡು, ಬೇರೆ ಆಲೋಚನೆ ಮಾಡದೆ, ತನ್ನ ಕೈಯಲ್ಲಿದ್ದ ಬಡಿಗೆಯನ್ನೆತ್ತಿ ಹೊಡೆದು ಮುಂಗುಸಿಯನ್ನು ಕೊಂದನು.

ಆಮೇಲೆ ಅವನು ಮನೆಯೊಳಗೆ ಬಂದು ಸುಖವಾಗಿ ನಿದ್ರಿಸುತ್ತಿದ್ದ ಮಗುವನ್ನೂ, ತುಂಡು ತುಂಡಾಗಿ ಸತ್ತಿರುವ ಹಾವನ್ನೂ ನೋಡಿ ಮರುಗ ತೊಡಗಿದನು. "ಅಯ್ಯೋ! ಎಂತಹ ಕೆಲಸಮಾಡಿದೆನಲ್ಲಾ? ಮಹಾ ಪಾಪಿಯಾದೆ. ನನ್ನ ಮಗುವನ್ನು ಕಾಪಾಡಿದ ಮುಂಗುಸಿಯನ್ನು ಕೈಯಾರೆ ಕೊಂದೆ! ಅಯ್ಯೋ!" ಎಂದು ಬ್ರಾಹ್ಮಣನು ದುಃಖವನ್ನು ತಾಳಲಾರದೆ, ನೆಲದಲ್ಲಿ ಹೊರಳುತ್ತಾ, ಎದೆಯನ್ನೂ ತಲೆಯನ್ನೂ ಚಚ್ಚಿಕೊಂಡನು.

ಆಗ ಅವನ ಹೆಂಡತಿ ಹಿಂದಿರುಗಿ ಬಂದು, "ಏನಿದು?" ಎಂದು ಕೇಳಿದಳು. ಬ್ರಾಹ್ಮಣನು ಅವಳಿಗೆ ನಡೆದ ಸಂಗತಿಯನ್ನೆಲ್ಲಾ ಹೇಳಿದನು. ಅದನ್ನು ಕೇಳಿ ಅವಳು, "ಅರಮನೆಯ ದಾನ ಅಂದ ಕೂಡಲೇ ದುರಾಶೆಯಿಂದ ಓಡಿದಿರಿ. ಮಗುವನ್ನು ನೋಡಿಕೊಳ್ಳಿ ಅಂತ ನಾನು ಹೇಳಿದ ಎಚ್ಚರಿಕೆಯನ್ನು ಮರೆತಿರಿ. ಅದಕ್ಕೆ ಸಿಕ್ಕಿದ ಫಲವೆಂದರೆ ನಮ್ಮ ಮಗುವನ್ನು ಕಾಪಾಡಿದ ಮುಗ್ಧ ಪ್ರಾಣಿಯ ಬಲಿ! ಮನುಷ್ಯರಿಗೆ ಆಶೆ ಇರಬೇಕಾದುದೇ ಆದರೂ ದುರಾಶೆ ದುಃಖಕ್ಕೆ ಕಾರಣವೆಂದು ಹಿರಿಯರು ಸುಮ್ಮನೆ ಹೇಳಿದರೇನು? ಈ ಬಗೆಯ ದುರಾಶಾ ಪಿಂಡಗಳ ನೆತ್ತಿಯ ಮೇಲೆ ಚಕ್ರವೇ ಏರಿ ತಿರುಗಿ ತಂತೆ!" ಎಂದಳು.

"ನೆತ್ತಿಯಲ್ಲಿ ಚಕ್ರ ಏರಿತೆ? ಅದೇನು ಕಥೆ?" ಎಂದು ಬ್ರಾಹ್ಮಣನು ಕೇಳಿದುದಕ್ಕೆ ಅವನ ಹೆಂಡತಿ ಹೀಗೆ ಹೇಳಿದಳು:

### ಆಶಾಪಾತಕ

ಒಂದು ಊರಿನಲ್ಲಿ ಅಲ್ಪ ಲೋಭಿ, ಮಿತ ಲೋಭಿ, ಅತಿ ಲೋಭಿ ಮತ್ತು ಅತ್ಯಂತ ಲೋಬಿ ಎಂಬ ನಾಲ್ವರು ಬ್ರಾಹ್ಮಣ ಯುವಕರು ಗಾಢ ಸ್ನೇಹಿತ

ರಾಗಿದ್ದರು. ಅವರೆಲ್ಲರೂ ಯಾವಾಗಲೂ ದಾರಿದ್ರ್ಯದ ಕಷ್ಟದಲ್ಲಿರುವವರೇ.

ಒಂದು ದಿನ ಅವರು ನಾಲ್ವರೂ ಕೂಡಿ ಮಾತುಕತೆಯಾಡಿಕೊಂಡಿರುವಾಗ, ಅತ್ಯಂತ ಲೋಭಿ ಉಳಿದವರೊಂದಿಗೆ ಹೀಗೆಂದನು :

"ಮಿತ್ರರೇ, ದಾರಿದ್ರ್ಯವನ್ನು ಮೀಂಚಿದ ಅವಮಾನವು ಬೇರೆಯಾವುದೂ ಇಲ್ಲ. ಬಂಧುಗಳ ಮಧ್ಯದಲ್ಲಿ ದರಿದ್ರನಾಗಿ ಜೀವಿಸುವುದಕ್ಕಿಂತ ಕ್ರೂರ ಮೃಗಗಳು ತಿರುಗುವ ಅರಣ್ಯಗಳಲ್ಲಿ, ಕಲ್ಲು ಮುಳ್ಳುಗಳ ನಡುವೆ ವಾಸಮಾಡುತ್ತ ಹುಲ್ಲಿನ ಮೇಲೆ ಮಲಗಿಕೊಂಡಿರುವುದೇ ಮೇಲು. ಬಡ ಸೇವಕನು ಎಷ್ಟು ವಿಶ್ವಾಸದಿಂದ ಸೇವೆ ಮಾಡಿದರೂ ಯಜಮಾನನು ತಿರಸ್ಕಾರ ದೃಷ್ಟಿಯಿಂದಲೇ ನೋಡುತ್ತಾನೆ. ಬೇರೆ ಕಡೆಯಲ್ಲಿ ಎಷ್ಟೋ ಒಳ್ಳೆಯವರೆನಿಸುವ ಬಂಧುಗಳು ಕೂಡ ಬಡವನ ವಿಷಯದಲ್ಲಿ ನಿರ್ದಯದಿಂದ ಪ್ರವರ್ತಿಸುತ್ತಾರೆ, ಬಡವರಲ್ಲಿರುವ ಸದ್ಗುಣಗಳೂ ಬೆಳಗಲಾರವು. ಬಡ ತಂದೆಯನ್ನು ಸ್ವಂತಮಗಂದಿರೇ ವಿಸರ್ಜಿಸುತ್ತಾರೆ. ಹೆಂಡತಿ ಸಹಾ ಬಡಗಂಡನನ್ನು ಲಕ್ಷಿಸುವುದಿಲ್ಲ. ಸ್ನೇಹಿತರಂತೂ ಕಣ್ಣೆತ್ತಿಯೂ ನೋಡರು. ಈ ಪ್ರಪಂಚದಲ್ಲಿ ಧೈರ್ಯ, ಸೌಂದರ್ಯ, ವಾಕ್ಚಾತುರ್ಯ, ಚಮತ್ಕಾರ, ವಿಜ್ಞಾನ, ಯುದ್ಧವಿದ್ಯೆಯ ಕೌಶಲವೂ ಎಲ್ಲಾ ಎಷ್ಟೇ ಇದ್ದರೂ ಸ್ವಲ್ಪವಾದರೂ ಸಂಪತ್ತು ಇಲ್ಲದಿದ್ದರೆ ಕೀರ್ತಿಯೂ ಇಲ್ಲ, ಮಣ್ಣೂ ಇಲ್ಲ. ಹಣವೊಂದಿದ್ದರೆ ಇಂತಹ ಗುಣಗಳಿಂದ ಲೋಕವನ್ನೇ ಜಯಿಸಬಹುದು. ಅದಿಲ್ಲದಿದ್ದರೆ ಎಲ್ಲವೂ ವ್ಯರ್ಥವೇ ! ಆದುದರಿಂದ ನಾವು ದೇಶ ಸಂಚಾರಮಾಡಿ ಧನಾರ್ಜನೆ ಮಾಡುವುದು ಒಳ್ಳೆಯದು."

ಈ ಮಾತಿಗೆ ಉಳಿದ ಮೂವರೂ ಸೈಗುಟ್ಟಿದರು. ಆ ಮೇಲೆ ಬೇಗದಲ್ಲೇ ನಾಲ್ವರೂ ತಮ್ಮ ಊರನ್ನು ಬಿಟ್ಟು ಧನ ಸಂಪಾದನೆ ಮಾಡಲಿಕ್ಕಾಗಿ ಹೊರಟರು.



ಹೊತ್ತು ಕಳೆಯುವುದೇ ಕಷ್ಟವಾಗಿರುವವನು ಬಂಧು ಮಿತ್ರರನ್ನೂ, ತಾಯಿಯನ್ನೂ, ಜನ್ಮ ಭೂಮಿಯನ್ನೂ ವಿಸರ್ಜಿಸಿ ದೇಶಾಂತರಗಳಿಗೆ ಹೋಗದೆ ಮತ್ತೇನು ತಾನೇ ಮಾಡುವನು ?

ಅವರು ಕೆಲವು ದಿನಗಳಲ್ಲಿ ಅವಂತಿ ದೇಶವನ್ನು ಸೇರಿಕೊಂಡರು. ಸಿಪ್ರಿ ನದಿಯಲ್ಲಿ ಸ್ನಾನಮಾಡಿ ನದಿಯ ತೀರದಲ್ಲಿರುವ ಆಲಯದಲ್ಲಿ ಮಹಾ ಕಾಲ ಶಿವನನ್ನು ಸೇವಿಸಿದರು. ಅದು ಮುಗಿದು ಅವರು ಆಲಯದಿಂದ ಹೊರಗೆ ಬರುವಾಗ ಭೈರವಾನಂದನೆಂಬ ಸುಪ್ರಸಿದ್ಧ ತಾಂತ್ರಿಕ ಸನ್ಯಾಸಿಯನ್ನು ಸಂಧಿಸಿದರು. ದೇವಾಲಯದ ಹೊರಾಂಗಣದ ಬದಿಯಲ್ಲಿ ಕುಳಿತಿದ್ದ ಭೈರವಾನಂದನಿಗೆ ಪ್ರಣಾಮ ಮಾಡಿ, ಅವನೊಂದಿಗೆ ಸಮೀಪದಲ್ಲಿದ್ದ ಅವನ ಮಠಕ್ಕೂ ಹೋದರು.

"ನಿಮ್ಮನ್ನು ನೋಡಿದ ಕೂಡಲೇ ನೀವು ಬಹಳ ದೂರದಿಂದ ಬರುವಿರೆಂದು ಗೊತ್ತಾಯಿತು. ನೀವು

ಯಾರು? ಎಲ್ಲಿಯವರೆಗೆ ಹೋಗುವಿರಿ? ನಿಮ್ಮ ಉದ್ದೇಶವೇನು?" ಎಂದು ಭೈರವಾನಂದನು ಅವರನ್ನು ಕೇಳಿದನು.

"ನಾವು ಧನವನ್ನು ಹುಡುಕುತ್ತಾ ಹೊರಟಿದ್ದೇವೆ. ಈ ಅನ್ವೇಷಣೆಯಲ್ಲಿ ಸತ್ತಾದರೂ ಸಾಯುತ್ತೇವೆಯೇ ಹೊರತು ಅನ್ವೇಷಣೆಯನ್ನು ಬಿಡಲಾರೆವು. ಏನೋ ಮಂತ್ರಶಕ್ತಿಯಿಂದ ಕಣ್ಮರೆಯಾಗಿರುವ ನಿಧಿಗಳನ್ನು ತಿಳಿದುಕೊಂಡು ಧನಿಕರಾಗಬಹುದೆಂಬುದನ್ನು ಕೇಳಿದ್ದೇವೆ. ಅಂತಹ ಮಹಾಮಂತ್ರವೇತ್ತರನ್ನು ಹುಡುಕುವುದು ನಮ್ಮ ಆಶಯವಾಗಿದೆ. ಸಾಹಸದಿಂದ ಯಾವುದಕ್ಕೂ ಸಿದ್ಧನಾದವನಿಂದ ಎಂತಹ ಅಸಾಧ್ಯ ಕಾರ್ಯಗಳೂ ಸಾಧ್ಯವಾಗುತ್ತವೆ. ಒಬ್ಬನು ಆಕಾಶದಿಂದ ಅಧಃಪತನವಾಗುತ್ತಾನೆ, ಮತ್ತೊಬ್ಬನು ನರಕದಿಂದ ಮೇಲೆ ಬಂದು ನಾಲ್ಕು ಸಮುದ್ರಗಳನ್ನು ಆಳುತ್ತಾನೆ. ಪತನಕ್ಕೂ, ಉನ್ನತಿಗೂ ವಿಧಿಯೇ ಕಾರಣವೆಂದು ಹೇಳುವುದು ಸರಿಯಲ್ಲ, ಪ್ರಯತ್ನ ಮಾಡುವುದೂ ಮಾಡದಿರುವುದೂ ಅದಕ್ಕೆ ಕಾರಣ. ಹಾಗೆ ಪ್ರಯತ್ನಿಸುತ್ತಿದ್ದರೆ ಆಕಸ್ಮಿಕವಾಗಿ ಫಲಿಸಿಬಿಡುತ್ತದೆ. ಅದುವೇ ಅದೃಷ್ಟ. ಸಾಹಸವಂತರು ಅಧಿಕಾರಗಳನ್ನು ಲಕ್ಷಿಸಲಾರರು. ತಮ್ಮ ಪ್ರಾಣಗಳನ್ನು ಅದಕ್ಕಿಂತ ಹೆಚ್ಚು ಅಲಕ್ಷಿಸುವರು. ಅಂಥವರ ದುಸ್ಸಾಹಸವು ಮಹಾ ಉದಾತ್ತವಾದದ್ದು. ಈ ಪ್ರಪಂಚದಲ್ಲಿ ಅತಿಯಾಗಿ ಶ್ರಮಪಡದೆ ಯಾವ ಸುಖವನ್ನೂ ಗಳಿಸಲು ಸಾಧ್ಯವಿಲ್ಲ. ನಾರಾಯಣನು ಲಕ್ಷ್ಮಿಯನ್ನು ಹೊಂದಲಿಕ್ಕಾಗಿ ಕೈಗಳಲ್ಲಿ ಗುಳ್ಳೆಗಳೇಳುವ ಹಾಗೆ ಸಮುದ್ರವನ್ನು ಮಥಿಸಿದನು. ಶ್ರಮಪಡದಿರುವವನ ಇರುವ ಸಂಪದವೂ ಕರಗಿ ಹೋಗಲು ತೊಡಗುತ್ತದೆ. ಕಾರ್ಯವಿಲ್ಲದ ರಾಜನು ಬೇರೆ ರಾಜ್ಯಗಳನ್ನು ಗೆಲ್ಲುವುದಿರಲಿ, ತನ್ನ ರಾಜ್ಯವನ್ನೇ ಉಳಿಸಿಕೊಳ್ಳಲಾರ. ನಿಧಿನಿಕ್ಷೇಪಗಳು ನೆಲಮಾಳಿಗೆಯಲ್ಲಿ ನಾಗರಹಾವುಗಳ ರಕ್ಷಣೆಯಲ್ಲಿದ್ದರೂ, ಪಿಶಾಚಿಗಳನ್ನು ಸಂತೃಪ್ತಿಪಡಿಸುವುದರಿಂದ ಅವು ದೊರಕುವಂತಿದ್ದರೂ, ಸ್ಮಶಾನಗಳಲ್ಲಿ ಶವಗಳ ಮಾಂಸವನ್ನು ಭೂತಗಳಿಗೆ ಮಾರುವುದರಿಂದ ಸಿಗುವಹಾಗಿದ್ದರೂ, ನಿಧಿಯಿರುವ ಸ್ಥಳವು ಯಾವುದೋ ಮಂತ್ರಗಳ ಮೂಲಕ ನಮಗೆ ತಿಳಿಯಲಿ, ನಾವು ಎಲ್ಲದಕ್ಕೂ ಸಿದ್ಧರೇ! ನಿಮ್ಮನ್ನು ನೋಡಿದರೆ ಅಮಾನುಷ ಶಕ್ತಿಗಳನ್ನು ಸಂಪಾದಿಸಿಕೊಂಡವರಂತೆ ಕಾಣುವಿರಿ. ನೀವು ನಮಗೆ ಸಹಾಯಮಾಡಬಲ್ಲಿರೆಂದು ನಂಬುತ್ತೇವೆ. ನಮ್ಮಂಥವರಿಗೆ ಸಹಾಯಮಾಡಲೇಬೇಕು. ದೊಡ್ಡ ಕೆಲಸಗಳು ದೊಡ್ಡವರಿಂದಲೇ ಆಗಬೇಕು. ಬಡಬಾಗ್ನಿಯನ್ನು ಸಮುದ್ರವೇ ಭರಿಸಬಲ್ಲುದು. ದಯಮಾಡಿ ನಮ್ಮ ಮೇಲೆ ಅನುಗ್ರಹ ತೋರಿಸಿರಿ" ಎಂದರು ಆ ನಾಲ್ಕು ಮಂದಿ ಮಿತ್ರರು.





# ಶಾಂತಿಪ್ರಿಯರಾಜ

ಅದೆಷ್ಟು ಕಥೆಗಳನ್ನು ಹೇಳುತ್ತದೋ ಅದರಷ್ಟೇ ಸಹನೆ ತುಂಬಿದವನಾದ ರಾಜಾ ತ್ರಿವಿಕ್ರನುನು, ಮತ್ತೆ ಮರದಬಳಿಗೆ ಹೋಗಿ ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಸಿ, ಎಂದಿನಂತೆ ಮೌನವಾಗಿ ತನ್ನ ಹೆಗಲ ಮೇಲೇರಿಸಿಕೊಂಡು ಸ್ಮಶಾನದ ಕಡೆಗೆ ನಡೆಯ ತೊಡಗಿದನು. ಆಗ ಆ ಶವದೊಳಗೆ ಸೇರಿಕೊಂಡ ಬೇತಾಳವು ಮಾತಾಡಲು ತೊಡಗಿ, "ಎಲೈರಾಜನೇ, ನಿನ್ನ ಕಾರ್ಯದೀಕ್ಷೆಯನ್ನು ಕಣ್ಣು ತುಂಬಾ ನೋಡಿ ಕೊಂಡಿರುವೆನಾದರೂ, ನಿನ್ನ ಕಾರ್ಯ ದೀಕ್ಷೆಯ ದೃಢತೆಯನ್ನು ಕುರಿತು ನಾನು ಸಂದೇಹ ಪಡುತ್ತೇನೆ. ಏಕೆಂದರೆ ಮಾನವರ ಸ್ವಭಾವವು ಹಿಡಿದ ನಿರ್ಣಯ ವನ್ನು ಕಡೆಯವರೆಗೂ ಹಿಡಿಯುವಷ್ಟರ ಮಟ್ಟಿಗೆ ಇರುವುದಿಲ್ಲ. ಇದಕ್ಕೆ ನಿದರ್ಶನವಾಗಿ ನನಗೊಂದು ಕಥೆ ನೆನಪಿಗೆ ಬರುತ್ತದೆ. ಹೇಳುತ್ತೇನೆ. ಮಾರ್ಗಾ ಯಾಸವಾಗದಂತೆ ಕಥೆ ಕೇಳುತ್ತಾ ನಡೆ." ಎಂದು ಹೇಳಿ ಕಥೆಗೆ ಪ್ರಾರಂಭಿಸಿತು:

ವಿಕ್ರಮಪುರವೆಂಬ ಚಿಕ್ಕದೊಂದು ದೇಶಕ್ಕೆ ಶ್ರೀಕೇತು ಎಂಬವನು ರಾಜನಾಗಿದ್ದನು. ಶ್ರೀಕೇತುವೂ ಅವನ ಹಿಂದಿನ ರಾಜರೂ ಕೂಡ ವಿದರ್ಭ ರಾಜ್ಯದ

---

## ಬೇತಾಳಕಥೆಗಳು...

ಸಾಮಂತರು. ಅಂತೆಯೇ ಹಿಂದಿನಿಂದಲೂ ವಿದರ್ಭ ದೇಶಕ್ಕೆ ಕಪ್ಪಕಟ್ಟಿಕೊಂಡು ಬರುತ್ತಿದ್ದರು. ಶ್ರೀಕೇತು ರಾಜನು ತಂದೆ ತಾತಂದಿರಿಗಿಂತಲೂ ಹೆಚ್ಚಿನ ವೀರನೂ, ಯೋಧನೂ ಆದುದರಿಂದ ತಾನೇಕೆ ಸ್ವತಂತ್ರ ರಾಜನಾಗಬಾರದೆಂದು ತೋರಿತು. ವಿದರ್ಭ ರಾಜನ ಪ್ರತಾಪದೊಂದಿಗೆ ಹೋಲಿಸಿದರೆ ತನ್ನ ಪ್ರತಾಪವು ಅವನಿಗಿಂತ ಹೆಚ್ಚಾಗಿರುವುದೆಂದು ನಂಬುವಂತಿದ್ದಿತು. ಅವನ ಅಂತರಂಗಿಕರು ಕೂಡಾ ವಿದರ್ಭದ ಮೇಲೆ ಯುದ್ಧ ಮಾಡಿ ಗೆಲ್ಲಬಹುದೆಂದು ಲೆಕ್ಕ ಹಾಕಿದರು. ಹಾಗೆ ಮಾಡಿ ವಿಕ್ರಮಪುರವನ್ನು ಸ್ವತಂತ್ರ ರಾಜ್ಯವನ್ನಾಗಿ ಮಾಡಲೇಬೇಕೆಂದು ಎಲ್ಲರೂ ಸಲಹೆ ಹೇಳಿದರು. ಆದರೆ ಕಡೆಗೆ ಶ್ರೀಕೇತು ತಾನಾಗಿ ಯುದ್ಧಕ್ಕೆ ಹೋಗುವುದು ಒಳ್ಳೆಯದಲ್ಲವೆಂದೇ ನಿಶ್ಚಯಿಸಿದನು. ಅವನು ಎಷ್ಟೇ ದೊಡ್ಡ ಯೋಧನಾದರೂ ಸ್ವಾಭಾವಿಕವಾಗಿ ಶಾಂತಿ ಪ್ರಿಯನಾದುದರಿಂದ ಯುದ್ಧವನ್ನು ದ್ವೇಷಿಸುತ್ತಿದ್ದನು. "ನಮ್ಮ ದೇಶಕ್ಕೆ ಈಗ ಯಾವುದು ಕಡಮೆಯಾಗಿದೆ ? ಯುದ್ಧಕ್ಕೆ ಕಾರಣವಾದರೂ ಏನಿದೆ ? ವಿದರ್ಭರಾಜನು ಕಪ್ಪ ತೆಗೆದುಕೊಂಡು ನಮಗೆ ಶತ್ರುಭಯವಿಲ್ಲದಂತೆ ಕಾಪಾಡುತ್ತಾನೆ. ಒಂದು ವೇಳೆ ನಾವು ಯುದ್ಧದಲ್ಲಿ ಗೆದ್ದು ಸ್ವತಂತ್ರರಾದ ಮೇಲೆ, ವಿದರ್ಭವು ನಮಗೆ ಶತ್ರುವಾಗುತ್ತದೆ. ಅದು ಮಾತ್ರವಲ್ಲ, ಪರಿಸರದ ರಾಜ್ಯಗಳೊಂದಿಗೆ ಕೂಡಾ ಯುದ್ಧ ಮಾಡುತ್ತ ಪ್ರಜೆಗಳನ್ನು ಅನಾವಶ್ಯಕವಾಗಿ ನಾನಾ ಕಷ್ಟಗಳಿಗೆ ಗುರಿಪಡಿಸಬೇಕಾಗುತ್ತದೆ." ಎಂದನು ಶ್ರೀಕೇತು.

"ಆದರೆ ಪರಾಧೀನತೆಗಿಂತಲೂ ಸ್ವತಂತ್ರ ರಾಜ್ಯವೆಂಬುದು ಗೌರವ ಪ್ರದವಲ್ಲವೇ ?" ಎಂದು ರಾಜನ ಅಂತರಂಗಿಕರು ಕೇಳಿದರು.

"ಪರಾಧೀನತೆಯೆಂಬುದು ರಾಜನಾದ ನನಗೊಬ್ಬನಿಗೇ ಬರುವಂಥಾದ್ದಲ್ಲವೆ ? ಅದಕ್ಕಾಗಿ ಅನೇಕ ಸಾವಿರ ಜನರ ಪ್ರಾಣಗಳನ್ನು ಬಲಿಕೊಡಲು ನನಗಿಷ್ಟವಿಲ್ಲ. ನಮ್ಮದು ಸ್ವತಂತ್ರ ರಾಜ್ಯವಾದ ಮಾತ್ರಕ್ಕೆ ನಮ್ಮ ಪ್ರಜೆಗಳು ಈಗಿಗಿಂತ ಹೆಚ್ಚು ಸುಖವಾಗಿರುವರೆಂದು ಹೇಳಲು ಸಾಧ್ಯವಿಲ್ಲ. ಆದರ ಮೇಲೆ ನಾನು ಹೇಳಿದ



ಹಾಗೆ ಮೇಲಿಂದ ಮೇಲೆ ಬರುವ ಯುದ್ಧಗಳಿಗೂ ಅವರು ಗುರಿಯಾಗಬೇಕಾದೀತು. ನಾವಾಗಿ ಪ್ರಾರಂಭಿಸಿದ ಯುದ್ಧವು ನಮ್ಮ ಮಟ್ಟಿಗೆ ನಿಂತು ಹೋಗಲಾರದು." ಎಂದ ರಾಜ.

ಶ್ರೀಕೇತುವಿನ ಶಾಂತಿ ಪ್ರಿಯತೆಯನ್ನು ಆತನ ಅಂತರಂಗಿಕರು ಹೃತ್ಪೂರ್ವಕವಾಗಿ ಮೆಚ್ಚಿಕೊಂಡರು. ಹೀಗಿರುವಾಗ ವಿದರ್ಭದೇಶಕ್ಕೆ ಈವರೆಗೂ ಬಾರದಂತಹ ಬರಗಾಲವು ಪ್ರಾಪ್ತವಾಯಿತು. ಅಲ್ಲಿಯ ಪ್ರಜೆಗಳಲ್ಲಿ ಅರಾಜಕತೆ ಪ್ರಬಲವಾಗುತ್ತ, ಸರಿಹದ್ದಿನ ರಾಜ್ಯಗಳ ಮೇಲೆ ದಾಳಿ ಮಾಡಿ ದೋಚಿಕೊಳ್ಳುತ್ತಾರೆಂದೂ ವಾರ್ತೆಗಳು ವಿಕ್ರಮಪುರಕ್ಕೆ ಬರತೊಡಗಿದುವು. ಶ್ರೀಕೇತು ರಾಜನು ಆಕಸ್ಮಾತ್ತಾಗಿ ಒಂದು ದಿನ ತನ್ನ ಮಂತ್ರಿಗಳನ್ನೂ, ಸೇನಾಪತಿಗಳನ್ನೂ ಕರೆದು, "ಎರಡು ದಿನಗಳೊಳಗೆ ಸೈನ್ಯಗಳನ್ನು ಯುದ್ಧಕ್ಕೆ ಸಿದ್ಧಗೊಳಿಸಿಬಿಡಿರಿ. ನಾವು ಪೂರ್ಣಬಲದೊಂದಿಗೆ ವಿದರ್ಭದ ಮೇಲೆ ದಂಡೆತ್ತಿ ಹೋಗಬೇಕು" ಎಂದನು.

ಮೊದಲು ಯಾರಿಗೂ ರಾಜನ ಮಾತನ್ನು ನಂಬಲಾಗಲಿಲ್ಲ. ಅಷ್ಟೊಂದು ಶಾಂತಿಪ್ರಿಯನಾಗಿದ್ದವನಿಗೆ, ಇಂತಹ ವಿಜಯಾಕಾಂಕ್ಷೆ ಹೇಗೆ ಬಂದಿತು ? ಶತ್ರು ಕ್ಲಿಷ್ಟಪರಿಸ್ಥಿತಿಯಲ್ಲಿರುವಾಗ ದಾಳಿ ಮಾಡುವಂತಹ ಹೇಡಿತನದ ದುರ್ಬುದ್ಧಿ ಶ್ರೀಕೇತುವಿನಂತಹ ಸಜ್ಜನನಿಗೆ ಹೇಗೆ ಬಂತೆಂದು ಅವರಿಗೆ ಅರ್ಥವಾಗಲಿಲ್ಲ.

ಅವರು ಅನುಮಾನದಿಂದ ಹಿಂದೆ ಮುಂದೆ ನೋಡುವುದನ್ನು ನೋಡಿ ಶ್ರೀಕೇತು ರೇಗಿದವನಾಗಿ, "ಒಂದು ನಿಮಿಷ ಕೂಡಾ ತಡಮಾಡುವಂತಿಲ್ಲ. ಸೈನ್ಯವನ್ನು ಸಿದ್ಧಪಡಿಸಿರಿ ಅಂದೆನಲ್ಲ ?" ಎಂದನು.

ಎರಡನೇ ದಿನವೇ ವಿಕ್ರಮಪುರಿಯ ಸೇನೆಗಳು ಬಲು ರಭಸದಿಂದ ಹೋಗಿ ವಿದರ್ಭದ ಮೇಲೆ ಮುಗಿಬಿದ್ದುವು. ವಿದರ್ಭದ ರಾಜನಾಗಲೀ, ಸೇನೆಗಳಾಗಲೀ ಯುದ್ಧವನ್ನು ತಡೆಯುವ ಸ್ಥಿತಿಯಲ್ಲಿಲ್ಲದುದರಿಂದ, ಶ್ರೀಕೇತುವಿಗೆ ಅವಲೀಲೆಯಾಗಿ ವಿಜಯ ಲಭಿಸಿಬಿಟ್ಟಿತು. ಅವನು ವಿದರ್ಭದೇಶಕ್ಕೆ ರಾಜನಾಗಿ ಪಟ್ಟಾಭಿಷೇಕ ಮಾಡಿಸಿಕೊಂಡ ಕೂಡಲೇ



ಒಂದು ವಿಷಯ ತಿಳಿದುಕೊಂಡನು. ಸೋತು ಹೋದ ವಿದರ್ಭದ ರಾಜನು ಬರಗಾಲದ ಪರಿಸ್ಥಿತಿಯಲ್ಲಿ, ಪ್ರಜೆಗಳಿಗೆ ಉಪಯೋಗವಾಗಬೇಕೆಂಬ ಯಾವ ಮುಂದಾಲೋಚನೆಯನ್ನೂ ಮಾಡಿರಲಿಲ್ಲ. ರಾಜ್ಯದ ಧಾನ್ಯಾಗಾರದಲ್ಲಿ ಒಂದು ಮುಷ್ಟಿ ಧಾನ್ಯವನ್ನು ಸಹಾ ಕೂಡಿಸಿಡಲಿಲ್ಲ. ಜಲಾಶಯಗಳಲ್ಲಿ ಸಾಕಷ್ಟು ನೀರು ನಿಲ್ಲುವಂತಹ ಕಾರ್ಯಗಳನ್ನೂ ಮಾಡಿಸಿರಲಿಲ್ಲ. ಶ್ರೀಕೇತು ಈ ಲೋಪಗಳನ್ನೆಲ್ಲ ಸರಿ ಮಾಡಿ, ವಿದರ್ಭವನ್ನು ಪಾಲಿಸಿದ ಹಿಂದಿನ ರಾಜರಿಗಿಂತಲೂ ದೊಡ್ಡ ಹೆಸರನ್ನೇ ಪಡೆದನು.

ಬೇತಾಳವು ಇಲ್ಲಿಗೆ ಕಥೆಯನ್ನು ಮುಗಿಸಿ, "ರಾಜನೇ, ಶ್ರೀಕೇತುವಿನ ಶಾಂತಿ ಪ್ರಿಯತೆಯೂ, ಯುದ್ಧದಲ್ಲಿ ವಿಮುಖತೆಯೂ ಬರಿಯ ಬೂಟಕವೇನು? ವಿದರ್ಭವು ಅಸಹಾಯಸ್ಥಿತಿಯಲ್ಲಿರುವಾಗ ಅವನು ಅದರ ಮೇಲೆ ಯುದ್ಧ ಪ್ರಕಟಿಸಿದ ರೀತಿ ನೋಡಿದರೆ, ಅವನು ಮೊದಲು ಯುದ್ಧಕ್ಕೆ ಹಿಂಜರಿದುದು ಅಪಜಯ ಹೊಂದುವೆನೆಂಬ ಭಯದಿಂದಲೇ ಎಂದು ಕಾಣುತ್ತದೆ. ಪುಷ್ಕಲನನ್ನು ಪರಾಕ್ರಮವಂತನೆಂದು ಹೇಳಲು ಸಾಧ್ಯವಿದೆಯೆ? ಈ ಸಂದೇಹಕ್ಕೆ ತಕ್ಕ ಸಮಾಧಾನ ತಿಳಿದಿದ್ದರೂ ಹೇಳದೆ ಹೋದರೆ ನಿನ್ನ ತಲೆಯೊಡೆದು ಹೋಳು ಹೋಳಾಗುತ್ತದೆ!" ಎಂದು ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ಶ್ರೀಕೇತುವು ಶಾಂತಿಪ್ರಿಯನೂ, ಯುದ್ಧವಿಮುಖನೂ ಅಲ್ಲವೆಂದು ಹೇಳಲು ಸಾಧ್ಯವಿಲ್ಲ. ಪ್ರಜೆಗಳ ಕ್ಷೇಮಕ್ಕಾಗಿ ಅವನು ತನ್ನ ಸ್ವಾತಂತ್ರ್ಯವನ್ನೂ ಲಕ್ಷ್ಯ ಮಾಡಿದವನಲ್ಲ. ಆದರೆ ಅವನು ಶಾಂತಿಗಾಗಿ ದೇಶ ಕ್ಷೇಮವನ್ನೂ, ಪ್ರಜಾ ಕ್ಷೇಮವನ್ನೂ ತ್ಯಾಗ ಮಾಡುವಂತಹ ಸಾಧುವೇನಲ್ಲ. ವಿದರ್ಭವು ಬರಗಾಲಕ್ಕೆ ಗುರಿಯಾಗಿ, ಅಲ್ಲಿಯ ಪ್ರಜೆಗಳು ಒಣಗುತ್ತ ಕೆರಳಿ ಅರಾಜಕ ತೆಗಳಿದರೆ ವಿಕ್ರಮಪುರಿಗೆ ಅವರಿಂದ ಎಂತಹ ಅಪಾಯವಾದರೂ ಬರಬಹುದು. ಅವರು ಮಿಡಿತೆಗಳ ಹಿಂಡಿನಂತೆ ವಿಕ್ರಮಪುರಿಯ ಮೇಲೆ ಬಿದ್ದರೆ, ವಿಕ್ರಮಪುರಿಯ ಪ್ರಜೆಗಳಿಗೆ ಯುದ್ಧಕ್ಕಿಂತಲೂ ಹೆಚ್ಚಿನ ನಷ್ಟವಾಗುತ್ತದೆ, ವಿದರ್ಭರಾಜನು ತನ್ನ ಪ್ರಜೆಗಳನ್ನು ಅಂಕೆಯಲ್ಲಿಡಲಾಗದೆ ಹೋದನೆಂದು ವಾರ್ತೆಗಳಿಂದ ಸ್ಪಷ್ಟವಾಗಿದೆ. ಅದಕ್ಕೇ ಶ್ರೀಕೇತು ಯುದ್ಧ ನಿರ್ಣಯ ಮಾಡಿ, ಅದನ್ನು ಬೇಗ ಬೇಗನೆ ಮಾಡಿ ಮುಗಿಸಿಬಿಟ್ಟನು. ಈ ಯುದ್ಧವು ಅವನ ಶಾಂತಿಪ್ರಿಯತೆಗೆ ಚಿಹ್ನೆಯಂತೆಯೇ ಆಯಿತು."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಸಹಾ ಮಾಯವಾಗಿ ಹೋಗಿ ಎಂದಿನಂತೆ ಮರದ ಕೊಂಬೆಯಲ್ಲಿ ನೇತಾಡಿತು.



# ನಾಯಕನಿಲ್ಲದ ಗುಂಪು

**ಸಿಂ**ದೂರ ದೇಶದ ಸರಹದ್ದು ಪ್ರಾಂತದ ದಟ್ಟವಾದ ಅರಣ್ಯದೊಳಗೆ ಕಳ್ಳರ ಗುಂಪೊಂದು ಅಡಗಿದ್ದಿತು. ಈ ಕಳ್ಳರು ಊರುಗಳ ಮೇಲೆ ಆಕಸ್ಮಿಕವಾಗಿ ಬಿದ್ದು ಕೊಳ್ಳೆಹೊಡೆದು ಓಡಿಬಿಡುತ್ತಿದ್ದರು. ಅವರನ್ನು ಓಡಿಸಿಕೊಂಡು ಹೋದ ರಾಜಭಟರ ಕೈಗೆ ಸಿಕ್ಕದಂತೆ ಕಾಡಿನೊಳಗೆ ಮಾಯವಾಗಿ ಬಿಡುತ್ತಿದ್ದರು.

ಅರಣ್ಯದೊಳಗೆ ರಾಜಭಟರು ಹೊಕ್ಕುಬಿಟ್ಟರೆ ಮುಗಿಯಿತು ಅವರ ಕಥೆ. ಜೀವದೊಂದಿಗೆ ಯಾರೂ ಹೊರಗೆ ಬರುವುದಿಲ್ಲ.

ಈ ಕಳ್ಳರನ್ನು ಹಿಡಿಯಲಾಗದ ರಾಜನು, ಆ ಕಳ್ಳರ ಗುಂಪಿನ ನಾಯಕನ ತಲೆಯನ್ನು ಕಡಿದು ತಂದವನಿಗೆ, ತನ್ನ ಕುಮಾರಿಯನ್ನಿತ್ತು ಮದುವೆ ಮಾಡಿ, ತನ್ನ ಅನಂತರ ಅವನನ್ನೇ ರಾಜನನ್ನಾಗಿ ಮಾಡುವೆನೆಂದೂ ಪ್ರಕಟಪಡಿಸಿದನು.

ಈ ಪ್ರಕಟನೆ ಹೊರಟ ಮೇಲೆ ಕಳ್ಳರ ನಾಯಕನಿಗೆ ತನ್ನ ಅನುಚರರೆಲ್ಲರ ಮೇಲೆಯೂ ದ್ರೋಹಬುದ್ಧಿ ಇರುವಂತೆ ಕಾಣಿಸಿತು. ಅವನು ಯಾರನ್ನೂ ನಂಬಲಾಗದೆ, ಯಾರೊಂದಿಗೂ ಏನೂ ಹೇಳದೆ ಎಲ್ಲಿಗೋ ಓಡಿ ಹೋದನು. ಕಳ್ಳರು ಇನ್ನೊಬ್ಬ ನಾಯಕನನ್ನು ಆರಿಸಿಕೊಳ್ಳುವುದಕ್ಕೆ ನೋಡಿದರು. ಆದರೆ ನಾಯಕನಾಗಿರಲು ಯಾರೂ ಒಪ್ಪಿಕೊಳ್ಳಲಿಲ್ಲ. ನಾಯಕನಿಲ್ಲದ ಕಳ್ಳರೆಲ್ಲ ತಲಾ ಒಂದೊಂದು ದಾರಿ ಹಿಡಿದರು.

ಈ ರೀತಿಯಾಗಿ ಸಿಂದೂರ ದೇಶಕ್ಕೆ ಕಳ್ಳರ ಭೀತಿ ತಗ್ಗಿತು.







# ಅಧಿಕಾರಿಯ ಪತ್ನಿ

ಹಿಂದೆ ಒಂದು ದೇಶದಲ್ಲಿ ಪ್ರಚಂಡ ಮಹಾರಾಜ ನೆಂಬವನು ಆಳಿಕೊಂಡಿದ್ದನು. ಅವನ ಆಳ್ವಿಕೆಯ ವಿಶೇಷವೇನೆಂದರೆ, ಪ್ರತಿ ಗ್ರಾಮದಲ್ಲಿಯೂ ಇಬ್ಬರು ರಾಜೋದ್ಯೋಗಿಗಳಿದ್ದು, ಗ್ರಾಮಕ್ಕೆ ಸಂಬಂಧಿಸಿದ ಎಲ್ಲಾ ಕೆಲಸಗಳನ್ನೂ ನೋಡಿಕೊಳ್ಳುತ್ತಿದ್ದರು. ಈ ರಾಜೋದ್ಯೋಗಿಗಳನ್ನು ಪೂರ್ಣವಾಗಿ ನಂಬದೆ, ಅವರು ತಮ್ಮ ಅಧಿಕಾರವನ್ನು ದುರ್ವಿನಿಯೋಗ ಪಡಿಸದಂತೆ, ಲಂಚ ಪಡೆಯದಂತೆ, ಅವರನ್ನು ತನಿಖೆ ಮಾಡಲಿಕ್ಕಾಗಿ ಕೆಲಮಂದಿ ಅಧಿಕಾರಿಗಳನ್ನು ಕೂಡಾ ಪ್ರಚಂಡ ಮಹಾರಾಜನು ನಿಯಮಿಸಿದ್ದನು. ಈ ಅಧಿಕಾರಿಗಳು ಮುಂದಾಗಿ ಯಾವ ಸೂಚನೆಯನ್ನೂ ಕೊಡದೆ ಯಾವುದೋ ಒಂದು ಗ್ರಾಮಕ್ಕೆ ಹೋಗಿ, ಅಲ್ಲಿಯ ಪರಿಸ್ಥಿತಿಗಳನ್ನು ಸ್ವಯಂ ಪರಿಶೀಲನೆ ಮಾಡಿ ರಾಜನಿಗೆ ನಿವೇದಿಕೆ ಕಳುಹಿಸುತ್ತಿದ್ದರು.

ಅಂತಹ ಅಧಿಕಾರಿಗಳಲ್ಲಿ ಒಬ್ಬನ ಹೆಸರು ರಾಮ ಭದ್ರನೆಂದು. ಅವನು ಯಾವ ಗ್ರಾಮಕ್ಕೆ ತನಿಖೆಗೆ ಹೋಗುವಾಗಲೂ ತನ್ನ ಹೆಂಡತಿಯನ್ನು ಕೂಡಾ ಕರೆದುಕೊಂಡು ಹೋಗುತ್ತಿದ್ದನು. ಆದುದರಿಂದ ರಾಮಭದ್ರನು ಹೆಂಡತಿಯನ್ನು ಬಿಟ್ಟು ಇರಲಾರ ನೆಂದೂ, ಹೆಂಡತಿ ಹಾಕಿದ ಗೆರೆಯನ್ನು ದಾಟಲಾರ ನೆಂದೂ, ಜನರು ಮಾತಾಡಿಕೊಳ್ಳುತ್ತಿದ್ದರು.

ರಾಮಭದ್ರನ ಹೆಂಡತಿಗೆ ತಾನು ದೊಡ್ಡ ಅಧಿ ಕಾರಿಯ ಪತ್ನಿ ಎಂಬ ಅಹಂಕಾರವಿದ್ದಿತು. ಅವಳು ಎಲ್ಲಿಗೆ ಹೋದರೂ ಎಲ್ಲರ ಮೇಲೆಯೂ ಗಂಡನನ್ನು ಮಿಂಚಿ ಜುಲುಮೆ ತೋರಿಸುತ್ತಿದ್ದಳು.

ಕೃಷ್ಣಾಪುರ ಎಂಬ ಗ್ರಾಮದಲ್ಲಿ ಹರಿ ಮತ್ತು ಗಿರಿ ಎಂಬವರು ರಾಜೋದ್ಯೋಗಿಗಳಾಗಿದ್ದರು. ಅವರು ಒಂದೇ ಮನೆಯ ಎರಡು ಭಾಗಗಳಲ್ಲಿ ತಮ್ಮ ತಮ್ಮ ಕುಟುಂಬದೊಂದಿಗೆ ವಾಸವಾಗಿದ್ದರು. ಒಂದುಸಾರಿ ರಾಮಭದ್ರನು ತನಿಖೆ ನಡೆಸಲು ಆ ಗ್ರಾಮಕ್ಕೆ ಬಂದು ಅವರಿರುವ ಮನೆಯಲ್ಲಿಯೇ ಇಳಿದುಕೊಂಡನು.

ಹರಿಯೂ ಗಿರಿಯೂ ತುಂಬ ನೀತಿವಂತರಾದು ದರಿಂದ ಊರವರೆಲ್ಲಾ ಅವರಿಬ್ಬರನ್ನು ಕುರಿತು ಶ್ಲಾಘಿಸಿಕೊಂಡು ಹೇಳುತ್ತಿದ್ದರು. ಅವರಿಗೆ ರಾಮ ಭದ್ರನ ತನಿಖೆಗಳಿಂದ ಯಾವ ಭಯವೂ ಇರಲಿಲ್ಲ. ಅವರು ರಾಮಭದ್ರನಿಗೆ ಬೇಕಾದ ಎಲ್ಲಾ ಸದು ಪಾಯಗಳನ್ನೂ ಮಾಡಿಸಿ ಕೊಟ್ಟು, ಅವನನ್ನು ಊರು ತೋರಿಸಲು ಕರೆದುಕೊಂಡುಹೋದರು.

ಜಿ. ರಾಮಲಕ್ಷ್ಮಿ

ಆ ಸಮಯದಲ್ಲಿ ಅಧಿಕಾರಿ ರಾಮಭದ್ರನ ಹೆಂಡತಿ ಹರಿಯ ಹೆಂಡತಿಯ ಮೇಲೆಯೂ ಗಿರಿಯ ಹೆಂಡತಿಯ ಮೇಲೆಯೂ ಬಹಳ ಕಾಠಿಣ್ಯವನ್ನು ಪ್ರದರ್ಶಿಸಿದಳು. ಆ ಶ್ರೀಮತಿಗೆ ಕುಡಿಯಲು ಒಂದು ಲೋಟ ನೀರಿನಿಂದ ಹಿಡಿದು ಎಲ್ಲವನ್ನೂ ಒದಗಿಸಬೇಕಾಗಿತ್ತು, ಯಾರೋ ಒಬ್ಬರು ಅವಳಿಗೆ ಯಾವಾಗಲೂ ಗಾಳಿ ಬೀಸಿಕೊಂಡಿರಬೇಕು.

ಇಂತಹ ಘನ ಶ್ರೀಮತಿ ಅಧಿಕಾರಿಯ ಪತ್ನಿಗೆ ಸೇವೆ ಮಾಡಿ ಮಾಡಿ ದಣಿದುಹೋದ ಗಿರಿಯ ಹೆಂಡತಿ, ಒಂದು ಕುರ್ಚಿಯಲ್ಲಿ ಉಸ್ಸೆಂದು ಕುಳಿತಳು. ತನ್ನ ಬದಿಯಲ್ಲೇ, ತನ್ನ ಸರಿಸಮಳಂತೆ ಕುಳಿತವಳನ್ನು ನೋಡಿ ರಾಮಭದ್ರನ ಪತ್ನಿ, "ಏನಿದು ಮರ್ಯಾದೆ ಕೇಡು! ನನ್ನೊಂದಿಗೆ ಸರಿಸಮಳಂತೆ ಕುರ್ಚಿಯಲ್ಲಿಯೋ ಕುಳಿತೆ?" ಎಂದಳು ಹುಬ್ಬು ಸುರುಗಿಸಿ.

ಗಿರಿಯ ಹೆಂಡತಿ ಬಿಟ್ಟುಕೊಡದೆ ಸಿಟ್ಟಿನಿಂದ, "ಏನಾಯಿತು ಕುಳಿತದ್ದರಿಂದ? ತಪ್ಪೇನಾಯಿತೂ ಅಂತ? ನಿನ್ನದೊಂದು ಹೆಚ್ಚೇನು? ನನ್ನದೊಂದು ಕಡಿಮೆಯೇನು? ಹೆಚ್ಚು ಹೇಳುವುದಾದರೆ ಇದು ನಮ್ಮದೇ ಮನೆ!" ಎಂದಳು.

"ಇದಿರಿಸಿ ಮಾತಾಡವೆಯಾ? ಇದು ನಿನ್ನ ಮನೆಯಾದರೇನಾಯಿತು? ನಿನ್ನ ಗಂಡನ ಮೇಲೆ ನನ್ನ ಗಂಡ ಅಧಿಕಾರಿಯಾಗಿದ್ದಾನೆ." ಎಂದಳು ರಾಮಭದ್ರನ ಹೆಂಡತಿ.

ಹರಿಯ ಹೆಂಡತಿ ಅಲ್ಲಿಗೆ ಬರುತ್ತ ಅವಳ ಮಾತು ಕೇಳಿ, "ನಿನ್ನ ಗಂಡ ನಮ್ಮ ಗಂಡಂದಿರ ಮೇಲೆ ಅಧಿಕಾರಿಯಾದರೆ, ನೀನು ನಮ್ಮ ಮೇಲೆ ಅಧಿಕಾರಿಣಿಯಲ್ಲವಷ್ಟೆ? ಇದನ್ನು ಸ್ವಲ್ಪ ನೆನಪಿನಲ್ಲಿಟ್ಟುಕೊಂಡು ಮಾತಾಡಮ್ಮ" ಎಂದಳು.

ರಾಮಭದ್ರನ ಹೆಂಡತಿಯ ಮರ್ಯಾದೆಗೆ ಧಕ್ಕೆ ಬಂದರೂ ಆಗೇನೂ ಮಾಡಲಾಗದೆ, ತನ್ನ ಗಂಡನು ಬಂದ ಕೂಡಲೇ, ಅವನೊಂದಿಗೆ ಹರಿ, ಗಿರಿಯರ ಹೆಂಡತಿಯರ ಸಂಗತಿಯನ್ನು ಉಪ್ಪು ಖಾರ ಒಗ್ಗರಣೆಗಳೊಂದಿಗೆ ತಲೆಗೇರುವ ಹಾಗೆ ಹೇಳಿದಳು. ಅದನ್ನು ಕೇಳಿ ರಾಮಭದ್ರನಿಗೆ ಬಹಳ ಕೋಪ



ಬಂದು, ಹರಿಯನ್ನೂ ಗಿರಿಯನ್ನೂ ಕರೆದು ವಿಚಾರಿಸಿದನು. ಅವರು ಕೂಡಾ ತಮ್ಮ ತಮ್ಮ ಹೆಂಡತಿಯರಿಂದ ನಡೆದ ಸಂಗತಿಯನ್ನು ತಿಳಿದುಕೊಂಡಿದ್ದರು. "ಇದರಲ್ಲಿ ನಮ್ಮವರ ತಪ್ಪೇನಿಲ್ಲವಲ್ಲ ? ನೀವು ನಮ್ಮ ಮೇಲೆ ಅಧಿಕಾರ ಮಾಡುವುದರಲ್ಲಿ ಅರ್ಥವಿದೆಯೇ ಹೊರತು. ನಿಮ್ಮ ಹೆಂಡತಿ ನಮ್ಮ ಹೆಂಡತಿಯರ ಮೇಲೆ ಅಧಿಕಾರ ತೋರಿಸುವುದು ನ್ಯಾಯವಾಗಬಹುದೇ ? " ಎಂದರು ಗಿರಿಯೂ ಹರಿಯೂ.

ಈ ಮಾತು ಕೇಳಿ ರಾಮಭದ್ರನು ಮತ್ತಿಷ್ಟು ಸಿಟ್ಟುಗೊಂಡು ಉರಿದು ಬೀಳುತ್ತ, "ನನ್ನ ಹೆಂಡತಿ ನಿಮ್ಮ ಹೆಂಡತಿಯರ ಮೇಲೆ ಅಧಿಕಾರಿಣಿಯಲ್ಲದಿರಬಹುದು. ಆದರೆ ನನಗೆ ಅವಳು ಅಧಿಕಾರಿಣಿಯೇ ! ಆವಳ ನಿರ್ಣಯದಂತೆಯೇ ನಾನು ನಿಮ್ಮಿಬ್ಬರನ್ನೂ ಉದ್ಯೋಗದಿಂದ ತೊಲಗಿಸುತ್ತೇನೆ !" ಎಂದನು.

ಹರಿಯೂ ಗಿರಿಯೂ ಎಷ್ಟು ತಿಳಿಯ ಹೇಳಿದರೂ ರಾಮಭದ್ರನು ಕೇಳಿಸಿಕೊಳ್ಳಲಿಲ್ಲ. ಅವನು ಹೊರಟು ಹೋದ ಮೇಲೆ ಅಲ್ಲಿ ನಡೆದ ಸಂಗತಿ ಊರೊಳಗೆಲ್ಲಾ ಗೊತ್ತಾಯಿತು. ಊರಿನವರು ಒಬ್ಬ ಮನುಷ್ಯನನ್ನು ರಾಜನ ಬಳಿಗೆ ಕಳುಹಿಸಿ, ಅಲ್ಲಿ ನಡೆದ ಸ್ತ್ರೀಯರೊಳಗಿನ ಜಗಳವು ರಾಜನ ಕಿವಿಗೆ ಬೀಳುವಂತೆ ಮಾಡಿದರು. ಪ್ರಚಂಡ ಮಹಾರಾಜನು ಗೂಢಚಾರನನ್ನು ಕಳುಹಿಸಿ ಅಲ್ಲಿ ನಡೆದುದು ನಿಜವೆಂದು ಸ್ಪಷ್ಟಪಡಿಸಿಕೊಂಡನು. ಆ ತಿಂಗಳಿನಲ್ಲಿ ರಾಮಭದ್ರನಿಗೆ ಸಂಬಳವು ತಲಪಲಿಲ್ಲ. ಅವನು ಗಾಬರಿಗೊಂಡು ಕೋಶಾಧಿಕಾರಿಯ ಬಳಿಗೆ ಹೋಗಿ ಕೇಳಿದನು. "ನನಗೇನೂ ಗೊತ್ತಿಲ್ಲ. ಮಹಾರಾಜರನ್ನೇ ಕೇಳಿರಿ" ಎಂದನು ಕೋಶಾಧಿಕಾರಿ.

ಕಡೆಗೆ ರಾಮಭದ್ರನು ಪ್ರಚಂಡ ಮಹಾರಾಜನ ದರ್ಶನ ಮಾಡಿ ತನ್ನ ಸಂಬಳದ ಸಂಗತಿಯನ್ನು ಕೇಳಿದನು. ಆದಕ್ಕೆ ರಾಜನು ಹೀಗೆಂದನು ; "ಇಷ್ಟು ಕಾಲದವರೆಗೆ ನೀನು ನನ್ನ ಅಧಿಕಾರದಲ್ಲಿರುವವನೆಂದು ತಿಳಿದುಕೊಂಡಿದ್ದೆ. ನಿನ್ನ ಮೇಲಧಿಕಾರಿ ನಾನಲ್ಲವೆಂದೂ ನಿನ್ನ ಹೆಂಡತಿಯೆಂದೂ ಇತ್ತೀಚೆಗೆ ತಿಳಿದು ಬಂತು. ಆದುದರಿಂದ ನಿನ್ನ ಸಂಬಳ ಮುಂತಾದ್ದನ್ನೆಲ್ಲಾ ನಿನ್ನ ಹೆಂಡತಿಯನ್ನೇ ಕೇಳು. ಮತ್ತು ನನ್ನ ಮುಂದೆ ಬಾಯಿ ತೆರೆದೆಯೆಂದರೆ, ಇಷ್ಟರವರೆಗೆ ನೀನು ನನ್ನ ಕಡೆಯಿಂದ ಪಡೆದ ಹಳೆಯ ಸಂಬಳವನ್ನೆಲ್ಲಾ ವಸೂಲು ಮಾಡಬೇಕಾದೀತು !"

ಅಲ್ಲಿಗೆ ರಾಮಭದ್ರನ ಉದ್ಯೋಗವೇ ಹೋಯಿತು. ಅವನಿಂದ ತೊಲಗಿಸಲ್ಪಟ್ಟ ಹರಿಯೂ, ಗಿರಿಯೂ ಮತ್ತೆ ತಮ್ಮ ಪದವಿಗಳನ್ನು ನೇರಾಗಿ ರಾಜನಿಂದಲೇ ಪಡೆದರು. ಅವರಿಬ್ಬರೂ ಗ್ರಾಮ ನಿವಾಸಿಗಳ ಅಭಿಮಾನಕ್ಕೆ ಪಾತ್ರರಾದವರೆಂದು ರಾಜನು ಅವರಿಗೆ ಪ್ರತ್ಯೇಕ ಬಹುಮಾನಗಳನ್ನೂ ಕೊಟ್ಟನು.





# ನಕಲಿನಗ

ಹಿಂದೆ ಒಂದು ಅಗ್ರಹಾರದಲ್ಲಿ ರಾಮಾವಧಾನಿ ಎಂಬ ದೊಡ್ಡ ಪಂಡಿತನಿದ್ದನು. ಅವನು ಬಾಲಕರಿಗೆ ವಿದ್ಯೆಗಳನ್ನು ಹೇಳಿಕೊಡುತ್ತ, ಅವರು ಯಥಾಶಕ್ತಿ ಕೊಡುವ ದಕ್ಷಿಣೆಗಳಿಂದ ಜೀವನ ಯಾತ್ರೆ ಸಾಗಿಸಿ ಕೊಂಡಿದ್ದನು. ಒಂದೇ ವಿಧವಾಗಿ ಆತನ ದಿನಗಳು ಸಾಗಿಕೊಂಡಿದ್ದುವು. ಹೀಗಿರುವಾಗ ಅವನ ಹೆಂಡತಿ ಮೀನಾಕ್ಷಿಗೆ, ಬಹಳ ಕಾಲದ ಮೇಲೆ ದೀಪಾವಳಿ ಹಬ್ಬಕ್ಕೆ ತನ್ನ ತೌರು ಮನೆಗೆ ಹೋಗಿ ಬರಬೇಕೆಂದು ತೋರಿತು. ಅವಳು ತನ್ನ ಮನಸ್ಸಿನಲ್ಲಿದ್ದ ಆಸೆಯನ್ನು ಗಂಡನೊಂದಿಗೆ ಹೇಳಿದಳು.

"ಅದಕ್ಕೇನಂತೆ ? ನೀನು ಹೋಗಿ ಬಾ, ಆದರೆ ನಾನೂ ನಿನ್ನ ಜತೆಯಲ್ಲಿ ಬಂದರೆ ಹುಡುಗರ ಓದು ಹಾಳಾಗುತ್ತದೆ. ಅದೂ ಅಲ್ಲದೆ ಖರ್ಚೂ ಹೆಚ್ಚಾಗುತ್ತದೆ. ನೀನು ಒಬ್ಬಳೇ ಹೋಗಿ ಬಾ" ಎಂದನು ರಾಮಾವಧಾನಿ.

"ನಾನೊಬ್ಬಳೇ ಹೋಗುತ್ತೇನೆ ಅನ್ನಿ. ಆದರೆ ಮದುವೆಯಾದ ಮೇಲೆ ಈವರೆಗೂ ನೀವು ನನಗೆ ಒಂದೇ ಒಂದು ನಗ ಕೂಡಾ ಮಾಡಿಸಲಿಲ್ಲ ಅಂದರೆ ನಮ್ಮವರ ಮುಂದೆ ನನಗೆ ಸಣ್ಣತನವಾಗಿ ಕಾಣುತ್ತೆ. ಆದ್ದರಿಂದ ನಾನು ಹೊರಡುವುದರೊಳಗೆ ನೀವು ನನಗೊಂದು ಹಾರವನ್ನು ಮಾಡಿಸಿ ಹಾಕಿರಿ" ಎಂದಳು ಮೀನಾಕ್ಷಿ.

"ನನ್ನ ಪರಿಸ್ಥಿತಿ ನಿನಗೆ ಗೊತ್ತಿಲ್ಲವೇನೋ ? ನನ್ನ ಪಾಠಶಾಲೆಯ ಹುಡುಗರು ಕೊಡುವ ದಕ್ಷಿಣೆ ದುಡ್ಡು ನಮ್ಮ ಖರ್ಚಿಗೆ ಅಲ್ಲಿಂದಲ್ಲಿಗೆ ಸರಿಯಾಗಿಬಿಡುತ್ತೆ. ನಗ ನಾಣ್ಯಗಳಿಗೆಲ್ಲ ನಾನೆಲ್ಲಿಂದ ತರಲಿ ಹೇಳು ?" ಎಂದನು ಅವಧಾನಿ.

"ನಾನೊಂದು ಹೇಳುತ್ತೇನೆ ಹಾಗೆ ಮಾಡಿ. ನಮ್ಮ ಪೆಟ್ಟಿಗೇಲಿ ನನ್ನ ತಾಯಿಯದು ಬೆಳ್ಳಿ ಕಡಗಗಳು ಬಿದ್ದಿವೆ. ಅಂತಹ ಗಟ್ಟಿ ನಗಗಳನ್ನು ಈಗ ಯಾರೂ ಹಾಕಿಕೊಳ್ಳುವುದಿಲ್ಲಷ್ಟೆ ? ಅವುಗಳನ್ನು ಮಾರಿ ಆ ಹಣದಿಂದ ಚಿನ್ನದ ಹಾರವನ್ನು ಮಾಡಿಸಿ ಬಿಡಿ." ಎಂದಳು ಮೀನಾಕ್ಷಿ.

ಹೆಂಡತಿಯ ಮಾತು ಸರಿಯೆಂದು ತೋರಿತು ರಾಮಾವಧಾನಿಗೆ. ಅವನು ಬೆಳ್ಳಿ ಕಡಗಗಳನ್ನು ತೆಗೆದುಕೊಂಡು ಪಟ್ಟಣದ ನಗಗಳ ಅಂಗಡಿಯಲ್ಲಿ ಮಾರಿ, ಅವುಗಳಿಗೆ ಬದಲಾಗಿ ಒಂದು ಚಿನ್ನದ ಹಾರವನ್ನು ಕೊಡಬೇಕೆಂದು ಅಂಗಡಿಯ ಯಜಮಾನನನ್ನು

" ರತ್ನ "

ಕೇಳಿದನು. "ಈ ಕಡಗಗಳ ಬೆಲೆಗೆ ಅಸಲು ಚಿನ್ನದ ನಗ ಯಾವುದೂ ಬರಲಾರದು ಅವಧಾನಿಗಳೇ. ಬೇಕಾದರೆ ಈಗ ಹೊಸದಾಗಿ ನಕಲು ಚಿನ್ನದ ನಗಗಳು ಬರ ತೊಡಗಿವೆ. ಅದರಲ್ಲಿ ಒಂದು ಹಾರವನ್ನು ತೆಗೆದು ಕೊಳ್ಳಿ. ಹೇಳಿದ ಹೊರತು ಯಾರಿಗೂ ಗೊತ್ತಾಗುವು ದಿಲ್ಲ. ಅಸಲು ಚಿನ್ನದ ಹಾಗೆಯೇ ಇರುತ್ತವೆ. ಬಣ್ಣವೂ ಎಷ್ಟು ವರ್ಷವಾದರೂ ಕೆಡದು. ಹಾರ ದೊಂದಿಗೆ ನಿಮಗೆ ಸ್ವಲ್ಪ ಹಣವೂ ತಿರುಗಿ ಬರುತ್ತೆ" ಎಂದನು ಅಂಗಡಿಯ ಒಡೆಯ.

ಅವನು ತೋರಿಸಿದ ನಕಲು ಚಿನ್ನದ ಹಾರವು ತುಂಬಾ ಚೆಂದಾಗಿದ್ದಿತು. ರಾಮಾವಧಾನಿ ಆ ಹಾರ ವನ್ನು ತೆಗೆದುಕೊಂಡು ಹೋಗಿ ಹೆಂಡತಿಗೆ ಕೊಟ್ಟು "ಪ್ರಸ್ತುತ ಇದನ್ನೇ ಹಾಕಿಕೊಂಡು ಹೋಗು. ಇನ್ನೊಂದು ಸಾರಿ ನೀನು ತವರು ಮನೆಗೆ ಹೋಗುವ ಸಂದರ್ಭ ಬರುವಾಗ, ನಾನೂ ಸ್ವಲ್ಪ ಹಣ ಸೇರಿ ಸಿಟ್ಟು, ಅಸಲು ಚಿನ್ನದ ನಗವನ್ನೇ ಮಾಡಿಸಿ ಹಾಕುತ್ತೇನೆ" ಎಂದನು.

"ನಾನೂ ಈ ನಗ ಅಸಲು ಚಿನ್ನದ್ದೆಂದೇ ಹೇಳು ತ್ತೇನೆ. ನೀವೂ ಎಲ್ಲರೊಂದಿಗೂ ಹಾಗೇ ಹೇಳಿರಿ. ನಿಜ ಹೇಳಿ ಏಕೆ ಸಣ್ಣತನ ತೋರಿಸಿಕೊಳ್ಳಬೇಕು ?" ಎಂದಳು ಮೀನಾಕ್ಷಿ ಗಂಡನೊಂದಿಗೆ.

ಅತ್ತೆಯ ಮನೆಗೆ ಹೋಗಿ ಬಹಳ ಕಾಲವಾದ ಮೇಲೆ ತೌರು ಮನೆಯ ಹೊಸ್ತಿಲು ಮೆಟ್ಟಿದ ಮೀನಾಕ್ಷಿಯನ್ನು ಅವಳ ಅಣ್ಣ ಮಾಧವನೂ ಅತ್ತಿಗೆ ರುಕ್ಮಿಣಿಯೂ ತುಂಬಾ ಆದರೋಪಚಾರಗಳಿಂದ ಬರಮಾಡಿಕೊಂಡರು. ರುಕ್ಮಿಣಿ ಮೀನಾಕ್ಷಿಯ ಕೊರಳಿ ನಲ್ಲಿ ಹೊಳೆಯುವ ಹಾರವನ್ನು ನೋಡಿ ತನ್ನ ಮೆಚ್ಚುಗೆಯನ್ನು ವ್ಯಕ್ತಪಡಿಸುತ್ತ, ಯಾವಾಗ ಮಾಡಿಸಿದ್ದೆಂದು ಕೇಳಿದಳು.

"ಇತ್ತೀಚೆಗಷ್ಟೇ ಮಾಡಿಸಿ ಹಾಕಿದರು. ಅತ್ತಿಗೇ, ನಮ್ಮವರ ಹತ್ತಿರ ಯಾರೋ ಜಮೀನ್ದಾರ್ರ ಹುಡುಗ ಓದು ಮುಗಿಸಿ ಒಳ್ಳೇ ಗುರುದಕ್ಷಿಣೆ ಸ್ವಲ್ಪ ಕೈತುಂಬ ಕೊಟ್ಟ. ಇವರು ಆ ಹಣದಿಂದ ನನಗೆ ನಗ ಮಾಡಿ ಸುತ್ತೇನಂತ ಹಟ ಹಿಡಿದು, ನಾನು ಬೇಡ ಬೇಡ



ಅಂತ ಎಷ್ಟು ಹೇಳಿದರೂ ಕೇಳದೆ, ಮಾಡಿಸಿ ತಕ್ಕೊಂಡು ಬಂದು ಹಾಕಿಬಿಟ್ಟರು." ಎಂದು ಮೀನಾಕ್ಷಿ ಹೊಂದಿಕೆಯಾಗಿ ಕಥೆ ಕಟ್ಟಿ ಹೇಳಿದಳು.

ಆ ಹಾರವನ್ನು ನೋಡಿದ ಕ್ಷಣದಿಂದಲೂ ತನಗೆ ಕೂಡಾ ಅಂತಹುದೊಂದು ನಗವಿದ್ದರೆ ಚೆನ್ನಾಗಿರುತ್ತದೆಂದು ರುಕ್ಮಿಣಿಗೆ ತೋರ ತೊಡಗಿತು. ಆ ದಿನ ರಾತ್ರಿ ತನ್ನ ಗಂಡನೊಂದಿಗೆ ತನ್ನ ಆಸೆಯನ್ನು ತೋಡಿಕೊಂಡಳು.

ಮಾಧವನು ಹೆಚ್ಚೇನೂ ಓದುಬರೆಹ ಕಲಿತವನಲ್ಲ. ತಂದೆ ತಾತಂದಿರು ಸಂಪಾದಿಸಿದ ಒಂದಿಷ್ಟು ಹೊಲಗಳನ್ನೇ ಸ್ವಂತ ಸಾಗುವಳಿಮಾಡುತ್ತ, ಹೆಂಡತಿ ಮಕ್ಕಳೊಂದಿಗೆ ಅಚ್ಚುಕಟ್ಟಾಗಿ ಸಂಸಾರ ನಡೆಸಿಕೊಂಡಿದ್ದ. ಹೆಚ್ಚಿನ ಹಣವೇನೂ ಕೂಡಿಟ್ಟಿರಲಿಲ್ಲ. ಇದೇ ಮಾತನ್ನು ಅವನು ಹೆಂಡತಿಯೊಂದಿಗೆ ಹೇಳಲು, ಅವಳು ತುಂಬಾ ಬಾಡಿ ಮುದುಡಿದಳು.

ಅದನ್ನು ನೋಡಲಾಗದೆ ಮಾಧವನು, "ಹೋಗಲಿ. ನಾಳೆ ಪಟ್ಟಣಕ್ಕೆ ಹೋಗಿ, ಸ್ವಲ್ಪ ಧಾನ್ಯಗಳನ್ನು ಮಾರಿ, ಆ ಹಣದಿಂದ ನಿನಗೊಂದು ಚಿನ್ನದ ಹಾರ ತರುತ್ತೇನೆ." ಎಂದು ಹೇಳಿದನು.

ಹಾಗೆಯೇ ಮಾಧವನು ಧಾನ್ಯದ ಮೂಟೆಗಳನ್ನು ಪಟ್ಟಣಕ್ಕೆ ಒಯ್ದು ಹಣಮಾಡಿಕೊಂಡು, ಚಿನ್ನದ ನಗಗಳ ಅಂಗಡಿಗೆ ಹೋಗಿ, ಒಂದು ಹಾರಕ್ಕೆ ಬೆಲೆ ಕಟ್ಟುವಾಗ, ಒಂದು ವರ್ಷವಿಡೀ ಧಾನ್ಯದಿಂದ ಬರುವ ಹಣದ ಬಹು ಭಾಗವೇ ಚಿನ್ನದ ಹಾರಕ್ಕೆ ಬೇಕಾಗಿದೆ ಎಂದು ಗೊತ್ತಾಯಿತು, ಹಾಗೆ ಮಾಡಿದರೆ ಒಂದು ವರ್ಷ ಸಂಸಾರದ ಗಾಡಿ ಹೇಗೆ ಸಾಗಿತು ?

"ಸುಂದರವಾದ ಮಾಯಾ ಸುವರ್ಣದ ಹಾರವಿದೆ. ನೋಡುವಿರಾ ? ಬಹಳ ಅಗ್ಗ. ಚಿನ್ನಕ್ಕೂ ಅದಕ್ಕೂ ಏನೂ ವ್ಯತ್ಯಾಸವಿಲ್ಲ" ಎಂದನು ನಗಗಳ ವ್ಯಾಪಾರಿ.

ಅವನು ತೋರಿಸಿದ ಹಾರಗಳನ್ನು ನೋಡಿ ಮಾಧವನಿಗಾದ ಆಶ್ಚರ್ಯ ಅಷ್ಟಿಷ್ಟಲ್ಲ. ಅವುಗಳಲ್ಲಿ ಒಂದು ಅಚ್ಚ ಮೀನಾಕ್ಷಿಯ ಹಾರದಂತೆಯೇ ಇದ್ದಿತು. ಮೀನಾಕ್ಷಿಯದು ಅಸಲು ಚಿನ್ನದ ಹಾರವಾದರೆ 'ಇದು' ನಕಲು ಚಿನ್ನದ್ದು. ಎರಡರ ವ್ಯತ್ಯಾಸವನ್ನು



ಯಾರೂ ಕಂಡುಹಿಡಿಯಲಾರರು. ಮಾಧವನು ಸ್ವಲ್ಪವೂ ಸಂಕೋಚಪಡದೆ ಆ ನಕಲು ಚಿನ್ನದ ಹಾರವನ್ನೇ ಕೊಂಡುಕೊಂಡು ಮನೆಗೆ ಬಂದನು.

ಗಂಡನು ತಂದ ಹಾರವನ್ನು ನೋಡಿದ ಕೂಡಲೇ ರುಕ್ಮಿಣಿ, ಅದು ಮೀನಾಕ್ಷಿಯ ಹಾರದ ಹಾಗೆಯೇ ಇರುವುದನ್ನು ಗಮನಿಸಿ, ತುಂಬಾ ಸಂತೋಷಪಟ್ಟಳು. ಆದರೆ ಮಾಧವನು ಅದು ಅಸಲು ಚಿನ್ನದ್ದು- ಅಲ್ಲವೆಂದು ಸತ್ಯ ಸಂಗತಿಯನ್ನೇ ರುಕ್ಮಿಣಿಯೊಂದಿಗೆ ಹೇಳಿಬಿಟ್ಟನು. ಬರುವ ವರ್ಷ ಯಾರ ಹೊಲವನ್ನಾದರೂ ಗೇಣಿಗೆಮಾಡಿಕೊಂಡು, ಹಣ ಸೇರಿಸಿ ಅಸಲು ಚಿನ್ನದ ಹಾರವನ್ನು ಮಾಡಿಸುವುದಾಗಿ ಹೆಂಡತಿಗೆ ಭರವಸೆಯನ್ನೂ ಕೊಟ್ಟನು. ಮೀನಾಕ್ಷಿಯೊಂದಿಗೆ ಸಮವಾಗಿ ತನಗೆ ಕೂಡಾ ಹಾರವು ಬಂದುದರಿಂದ ರುಕ್ಮಿಣಿ ಸಮಾಧಾನಗೊಂಡಳು

"ಇವರಿಗೆ ಹಣ ಸೇರಿಸಿಡಲಿಕ್ಕಷ್ಟೇ ಗೊತ್ತು ಹೊರತು, ನಗನಟ್ಟು ವ್ಯವಹಾರ ತಿಳಿಯದು. ನಿನ್ನ ಹಾರ ತೋರಿಸಿ ಅಂಥಾದ್ದೇ ತನ್ನೀ ಅಂದೆ. ಮಾತಾಡದೆ ತಂದುಬಿಟ್ಟರು." ಎಂದಳು ರುಕ್ಮಿಣಿ ಮೀನಾಕ್ಷಿಯೊಂದಿಗೆ. ರುಕ್ಮಿಣಿಯ ಹಾರವನ್ನು ನೋಡಿ, ಅದು ತನ್ನ ಹಾರದ ಹಾಗೆಯೇ ಇರುವುದನ್ನು ಕಂಡು ಆಶ್ಚರ್ಯವೂ, ಅದು ನಿಜವಾದ ಚಿನ್ನದ ಹಾರವೆಂದುಕೊಂಡು ಅಸೂಯೆಯೂ ಆಯಿತು ಮೀನಾಕ್ಷಿಗೆ.

ಆ ದಿನವಿಡೀ ಮೀನಾಕ್ಷಿಯೂ ರುಕ್ಮಿಣಿಯೂ ಒಬ್ಬರನ್ನು ನೋಡಿ ಒಬ್ಬರು ಅಸೂಯೆ ಪಡುತ್ತಲೇ ಇದ್ದರು. ಆ ರಾತ್ರಿಯಲ್ಲಿ ಇಬ್ಬರಿಗೂ ಸರಿಯಾಗಿ ನಿದ್ದೆಯೂ ಬಂದಿಲ್ಲ. ಬೆಳಗಾದರೆ ಹಬ್ಬ. ರುಕ್ಮಿಣಿ ಮಕ್ಕಳಿಗೆ ಎಣ್ಣೆ ಹಚ್ಚಿ ಸ್ನಾನಕ್ಕೆ ಅಣಿಮಾಡುತ್ತಿದ್ದಳು. ಅವಳೂ ತೈಲಾಭ್ಯಂಜನಕ್ಕೆ ಉಪಕ್ರಮಿಸಿದಳು. ಸಮಯ ಹೊಂಚಿಕೊಂಡಿದ್ದ ಮೀನಾಕ್ಷಿ ತನ್ನ ಹಾರವನ್ನು ರುಕ್ಮಿಣಿಯ ಹಾರದ ಜಾಗದಲ್ಲಿಟ್ಟು, ಅವಳದನ್ನು ತಾನು ಎತ್ತಿಕೊಂಡಳು.

ಹಾಗೆಯೇ ಮೀನಾಕ್ಷಿ ಸ್ನಾನಮಾಡುವಾಗ ರುಕ್ಮಿಣಿ ಮತ್ತೆ ಎರಡು ಹಾರಗಳನ್ನೂ ಬದಲಾಯಿಸಿಬಿಟ್ಟಳು. ಈಗ ಯಾರ ಹಾರ ಅವರ ಬಳಿಯಲ್ಲೇ ಇದ್ದರೂ, ತಮ್ಮ ನಕಲು ನಗವು ಅಸಲು ನಗವಾಯಿತೆಂಬ ಸಂತೃಪ್ತಿ ಇಬ್ಬರ ಮನಸ್ಸಿನೊಳಗೂ ಉಂಟಾಯಿತು. ಹಬ್ಬ ಅತ್ಯಾನಂದವಾಗಿ ಕಳೆದ ಮೇಲೆ ಮೀನಾಕ್ಷಿ ತೌರು ಮನೆಯಿಂದ ಹಿಂದಿರುಗಿದಳು.

ಮರು ವರ್ಷ ರುಕ್ಮಿಣಿ ಅಸಲು ಚಿನ್ನದ ಹಾರವನ್ನು ಕುರಿತು ಕೇಳದೆ ಸುಮ್ಮನಿರುವುದನ್ನು ನೋಡಿ ಮಾಧವನು ಸಂತೋಷಪಡುತ್ತ ಸುಮ್ಮನಿದ್ದನು. ಹಾಗೆಯೇ ರಾಮಾವಧಾನಿಯೂ ಮರುವರ್ಷದಲ್ಲಿ ಮೀನಾಕ್ಷಿ ಚಿನ್ನದಹಾರ ಮಾಡಿಸಬೇಕೆಂದು ಕೇಳದಿರುವುದನ್ನು ನೋಡಿ ಆಶ್ಚರ್ಯಪಟ್ಟನು.





# ನಾರದ

ಪುರಾಣದ ಕಥೆಗಳಲ್ಲಿ ನಾರಾಯಣ ನಾಮ ಸಂಕೀರ್ತನೆ ಮಾಡುತ್ತ ಬಂದು ಹೋಗುವ ಈ ನಾರದನು ಎಲ್ಲರಿಗೂ ಪರಿಚಿತನೇ. ಆದರೆ ಒಬ್ಬ ನಾರದನ ವಿಷಯದಲ್ಲಿಯೇ ಬೇರೆ ಬೇರೆ ಕಥೆಗಳಿವೆ. ಬೇರೆ ಬೇರೆ ನಾರದರಿರುವರೆಂತಲೂ ಹೇಳಬಹುದು. ಸಪ್ತರ್ಷಿಗಳ ಪಟ್ಟಿಯಲ್ಲಿ ಈ ನಾರದನಿದ್ದಾನೆ. ಅವನ ಹಿಂದೆ ಸಂವರ್ತ, ಮೇರು ಸಾವರ್ಣಿ, ಮಾರ್ಕಂಡೇಯ, ಸಾಂಖ್ಯ, ಯೋಗಿ, ದೂರ್ವಾಸರೂ ಇದ್ದಾರೆ. ಅವನು ದೇವರ್ಷಿಗಳ ಗುಂಪಿನವನೆಂತಲೂ ಪುರಾಣಗಳು ಹೇಳುತ್ತವೆ. ದಕ್ಷ ಪ್ರಜಾಪತಿಯ ಕುಮಾರಿಯರಲ್ಲಿ ಒಬ್ಬಳಾದ ಪ್ರಿಯಾ ಎಂಬವಳು ಬ್ರಹ್ಮನಿಂದ ನಾರದನನ್ನು ಹಡೆದಳೆಂದು ಒಂದು ಕಥೆಯಿದೆ. ಇವನು ಬ್ರಹ್ಮಚಾರಿಯಾಗಿಯೇ ಇರುವನೆಂದು ಸಾರುವ ಕಥೆಗಳೂ ಇವೆ. ನಾರದನು ಸೃಂಜಯನೆಂಬ ರಾಜನ ಮಗಳನ್ನು ಪ್ರೇಮಿಸಿ ಮದುವೆಯಾದನೆಂದೂ ಕಥೆಯಿದೆ. ನಾರದ ಎಂದರೆ "ನೀರು ಕೊಡುವವನು" ಅಂದರೆ ಮೇಘವೆಂದು ಅರ್ಥವಿದೆ. ಇವನು ಒಂದೇ ಕಡೆಯಲ್ಲಿ ಸುಮ್ಮನಿರದೆ ಮೇಘದಹಾಗೆ ಲೋಕ ಸಂಚಾರಿಯಾಗಿ ಯಾವಾಗಲೂ ಎಲ್ಲಾ ಕಡೆಗೂ ತಿರುಗಾಡಿಕೊಂಡೇ ಇರುವವನು. ಒಂದು ಕಡೆಯ ವಾರ್ತೆಗಳನ್ನು ಇನ್ನೊಂದು ಕಡೆಗೆ ತಿಳಿಸುವನು. ಮಹತೀ ಎಂಬ ಪ್ರಸಿದ್ಧವಾದ ವೀಣೆಯ ಮೇಲೆ ಭಕ್ತಿ ಗೀತಗಳನ್ನು ಹಾಡುವವನು. ಇವನು ದೇವತೆಗಳ ಕಡೆಯವನೇ ಆದರೂ ದಾನವರೊಂದಿಗೆ ಕೂಡಾ ಸ್ನೇಹವಾಗಿರುವವನೆಂದೂ, ಇಲ್ಲಿಯದು ಅಲ್ಲಿ, ಅಲ್ಲಿಯದು ಇಲ್ಲಿ ಚಾಡಿಗಳನ್ನು ಹೇಳಿ ಕಲಹ ಹುಟ್ಟಿಸಿ ಸಂತೋಷಪಡುತ್ತಾನೆಂದೂ ಎಷ್ಟೋ ಕಥೆಗಳಿವೆ. ಅವನಿಗೆ ಕಲಹ ಭೋಕ್ತನೆಂದೇ ಖ್ಯಾತಿ. ಕಲಹಾಶನನೆಂದರೆ ನಾರದನೆಂದೇ ಅರ್ಥ. ಅವನು ಒಮ್ಮೆ ಸುಮ್ಮನಿದ್ದ ಜಲಂಧರನನ್ನು ಸಂಧಿಸಿ ಪಾರ್ವತಿಯ ಮೇಲೆ ಅವನಿಗೆ ಮೋಹ ಉಂಟಾಗುವಂತೆ ಮಾಡಿದನು. ಆ ಮೂಲಕವಾಗಿ ಶಿವನೊಂದಿಗೆ ಜಲಂಧರನು ಯುದ್ಧದಲ್ಲಿ ಸಿಕ್ಕಿಬಿದ್ದು ಪ್ರಾಣ ಕಳೆದುಕೊಂಡನು. ಹೀಗೆ ನಾರದನು ಕಲಹ ಕಾರಕನಾದರೂ ಕಡೆಗೆ ಲೋಕಕ್ಕೆ ಒಳಿತಾಗುವಂತೆಯೇ ಮಾಡುತ್ತಾನೆಂಬುದು ಅವನಿಗಿರುವ ವಿಶೇಷಣವಾಗಿದೆ. ಹಾಗೆಯೇ ನಾರದನು ಗರುತ್ಮಂತನನ್ನು ಕದ್ರುವಳ ಮಕ್ಕಳಾದ ಹಾವುಗಳ ಮೇಲೆ ಕೆರಳಿಸಿ, ವಿನತೆಯ ದಾಸ್ಯ

ವಿಮೋಚನೆಮಾಡಿಸಿದ್ದಾನೆಂದೂ ಕಥೆಯಿದೆ, ಕಾಲಯವನನನ್ನು ಕೃಷ್ಣನಮೇಲೆ ಸಿಡಿದೇಳಿಸಿ ಕೊಲ್ಲಿಸಿದ ಮೂಲಕಾರಕನೂ ನಾರದನೇ.

ಸಂಗೀತಕ್ಕೆ ತುಂಬುರು, ನಾರದರನ್ನು ಪ್ರಸಿದ್ಧವಾಗಿ ಹೇಳಿಕೊಳ್ಳುತ್ತಾರೆ. ನಿಜಕ್ಕೂ ತುಂಬುರುವೂ ನಾರದನೂ ಸಮಾಪದವರೇನಲ್ಲ, ತುಂಬುರು ಗಂಧರ್ವನು. ಅವನು ಕಳಾವತಿ ಎಂಬ ವೀಣೆಯನ್ನು ಬಾರಿಸಿಕೊಂಡಿರುವವನು.

ಒಂದು ಸಾರಿ ಸ್ವರ್ಗದಲ್ಲಿ ಕೌಶಿಕನೆಂಬವನು ಗಾನ ಮಾಡಿಕೊಂಡಿರುವಾಗ ಅಲ್ಲಿಗೆ ಲಕ್ಷ್ಮೀದೇವಿ ತನ್ನ ಪರಿಚಾರಿಕೆಯರೊಂದಿಗೆ ಬಂದಳು. ಅವಳೊಂದಿಗೆ ನಾರದನೂ ತುಂಬುರುವೂ ಬಂದರು. ಲಕ್ಷ್ಮಿಗೆ ತುಂಬುರುವಿನ ಮೇಲೆ ತುಂಬ ಅಭಿಮಾನವಿದ್ದುದರಿಂದ ಕೌಶಿಕನೊಂದಿಗೆ ತುಂಬುರುವನ್ನೂ ಗಾನ ಮಾಡಲು ಹೇಳಿ ಅವರಿಬ್ಬರಿಗೂ ಬಹುಮಾನ ಕೂಡಾ ಕೊಟ್ಟಳು. ಇದನ್ನು ನೋಡಿ ನಾರದನಿಗೆ ತುಂಬ ಅವಮಾನವಾಗಿ ಬಾಧೆಪಡ ತೊಡಗಿದನು.

ವಿಷ್ಣು ನಾರದನನ್ನು ಸಮಾಧಾನಮಾಡುತ್ತ, "ನಿನಗೆ ಗಾನ ಕಳೆಯಲ್ಲಿ ಪ್ರಾವೀಣ್ಯತೆ ಬರಬೇಕಾದರೆ, ಮಾನಸೋತ್ತರ ಪರ್ವತಕ್ಕೆ ಹೋಗು. ಅಲ್ಲಿ ಗಾನ ಬಂಧು ಎಂಬ ಗೂಗೆಯೊಂದಿದೆ. ಅದರ ಹತ್ತಿರ ಸಂಗೀತ ಕಲಿತುಕೋ" ಎಂದು ಹೇಳಿದನು. ನಾರದನು ಹಾಗೆಯೇ ಆ ಗೂಗೆಯ ಹತ್ತಿರ ಹೋಗಿ ಸಂಗೀತ ಕಲಿತು ಹಿಂದಿರುಗಿ ಬಂದು, ತುಂಬುರುವಿನೊಂದಿಗೆ ಸ್ಪರ್ಧೆ ನಡಸಿ ಸೋತುಹೋದನು.

ಹೀಗೆ ಎರಡನೇಸಾರಿ ನಾರದನು ಪರಾಭವಗೊಂಡು ವಿಷ್ಣುವಿನ ಬಳಿಗೆ ಹೋಗಿ, ತನಗೆ ನಡೆದ ಅವಮಾನವನ್ನು ಕುರಿತು ಹೇಳಿಕೊಂಡನು.

"ಚಿಂತಿಸಬೇಡ ಬಿಡು. ನಾನು ಕೃಷ್ಣನಾಗಿ ಅವತರಿಸಿದಾಗ, ನೀನು ನನ್ನ ಹತ್ತಿರ ಬಂದು ಸಂಗೀತ ಕಲಿತುಕೋ" ಎಂದನು ವಿಷ್ಣು.

ಮುಂದೆ ನಾರದನು ಅದೇ ವಿಧವಾಗಿ ಕೃಷ್ಣನ ಬಳಿಯಲ್ಲಿ ಸಂಗೀತ ಕಲಿತು ಅದರಲ್ಲಿ ಪರಿಪೂರ್ಣತ್ವವನ್ನು ಸಂಪಾದಿಸಿದನು.

ನಾರದನಿಗೆ ಪರ್ವತನೆಂಬ ಸೋದಳಿಯನೊಬ್ಬ ಇರುವನೆಂದೂ, ಇಬ್ಬರೂ ಕೂಡಿಯೇ ಲೋಕಸಂಚಾರ ಮಾಡುವರೆಂದೂ ಹೇಳುತ್ತಾರೆ. ಪರ್ವತನು ನಾರದನಿಗೆ ಹೇಗೆ ಸೋದರಳಿಯನಾಗುವನೋ ಗೊತ್ತಾಗುವುದಿಲ್ಲ. ಪರ್ವತನೆಂದರೆ ನಾರದನೇ ಎಂದು ಕೂಡಾ ಕೆಲವರು ಹೇಳುತ್ತಾರೆ. ಒಟ್ಟಿನ ಮೇಲೆ ನಾರದ ಪರ್ವತರು ಒಟ್ಟೊಟ್ಟಿಗೇ ಲೋಕಸಂಚಾರ ಮಾಡುವವರಾಗಿ, ಅವರೊಳಗೆ ಯಾವ ರಹಸ್ಯವೂ ಇಲ್ಲದುದರಿಂದಲೇ ಇಬ್ಬರೂ ಒಬ್ಬನೇ ಅನ್ನುವರೋ ಏನೋ ?



# ಅಂಬರೀಷ



ನಾಭಾಗನ ಮಗನಾದ ಅಂಬರೀಷನು ಮಹಾ ವಿಷ್ಣುಭಕ್ತನು. ಅವನ ಭಕ್ತಿಗೆ ಮೆಚ್ಚಿ ವಿಷ್ಣು ಅವನಿಗೆ ತನ್ನ ಸುದರ್ಶನ ಚಕ್ರವನ್ನು ನೆನೆದಾಗ ಕೊಡುವೆನೆಂದು ಹೇಳಿದ್ದನು. ಆದರೆ ಅಂಬರೀಷನಿಗೆ ಅದರಿಂದ ಉಪಯೋಗವೇನಿರಲಿಲ್ಲ.

ಮಹಾರಾಜನಾದ ಅಂಬರೀಷನು ಅನೇಕ ಅಶ್ವಮೇಧ ಯಾಗಗಳನ್ನು ಮಾಡಿದ್ದನು. ಯಾಗಗಳು ಮುಗಿದಾಗಲೆಲ್ಲ ಅಪರಿಮಿತವಾಗಿ ದಾನ ಧರ್ಮಗಳನ್ನು ಮಾಡುತ್ತಿದ್ದನು.







ಅಂಬರೀಷನು ಏಕಾದಶೀ ವ್ರತವನ್ನು ತಪ್ಪದೆ ಆಚರಿಸುತ್ತಿದ್ದನು. ದ್ವಾದಶಿಯ ಘಳಿಗೆ ಮುಗಿಯುವುದರೊಳಗೆ ಪಾರಣೆ ಮುಗಿಸಿ ಭೋಜನ ಮಾಡುವನು.



ಒಂದುಸಾರಿ ದ್ವಾದಶಿಯ ಹೊತ್ತಿಗೆ ಅತಿಥಿಯಾಗಿ ದೂರ್ವಾಸನು ಬಂದನು. ಅಂಬರೀಷನು ದೂರ್ವಾಸನಿಗೆ ಸ್ವಾಗತ ಹೇಳಿ ದ್ವಾದಶಿ ಪಾರಣೆಗೆ ಬರಬೇಕೆಂದು ಆಹ್ವಾನಿಸಿದನು. ಸ್ನಾನ ಮಾಡಿ ಬರುವೆನೆಂದು ದೂರ್ವಾಸನು ನದಿಗೆ ಹೋದನು.



ನದಿಗೆ ಹೋದ ದೂರ್ವಾಸನು ಎಷ್ಟು ಹೊತ್ತಾದರೂ ಬಾರದಿರಲು, ದ್ವಾದಶಿಘಳಿಗೆ ಮೀರುವ ಹೊತ್ತು ಸಮೀಪಿಸಲು, ಅತಿಥಿಯನ್ನು ಬಿಟ್ಟು ಭೋಜನ ಮಾಡಲಾಗದೆ, ಅಂಬರೀಷನು ಆ ಘಳಿಗೆಯಲ್ಲಿ ತೀರ್ಥಪಾನ ಮಾಡಿದನು.



ಮರು ನಿಮಿಷದಲ್ಲೇ ದೂರ್ವಾಸನು ಬಂದು "ನನಗಿಂತ ಮೊದಲು ತೀರ್ಥ ತೆಗೆದುಕೊಂಡು ಅತಿಥಿಯನ್ನು ಅಮಾನಿಸಿದೆಯಾ ?" ಎಂದು ಕೋಪದಿಂದ ಕೂಗಾಡಿದನು.

ದೂರ್ವಾಸನು ತನ್ನ ಜಟೆಯೊಂದನ್ನು ಕಿತ್ತು ನೆಲಕ್ಕೆ ಬಡಿಯಲು, ಮಹಾಕೃತ್ಯ ಎಂಬ ಭೂತವು ಹುಟ್ಟಿ ಅಂಬರೀಷನ ಮೇಲೆ ಧುಮುಕಿತು.







ಆ ಕ್ಷಣದಲ್ಲಿ ಅಂಬರೀಷನು ಸುದರ್ಶನ ಚಕ್ರವನ್ನು ಸ್ಮರಿಸಿದನು. ಆ ಚಕ್ರವು ಮಹಾಕೃತ್ಯ ಭೂತವನ್ನು ಕೊಂದು ಹಾಕಿತು.

ಅಷ್ಟಕ್ಕೆ ಸುಮ್ಮನಾಗದೆ ಆ ಚಕ್ರವು ದೂರ್ವಾಸನ ಕಡೆಗೆ ಹೊರಳಿತು. ಅದನ್ನು ತಡೆಯಲು ದೂರ್ವಾಸನ ತಪಃಶಕ್ತಿ ಸಾಲಲಿಲ್ಲ.





ದೂರ್ವಾಸನು ಓಡಲು ತೊಡಗಿ ಅರಣ್ಯದಲ್ಲಿ ಅಡಗಿಕೊಂಡನು. ಸುದರ್ಶನ ಚಕ್ರದ ರಭಸಕ್ಕೆ ಅರಣ್ಯಕ್ಕೆ ಕಾಡುಕಿಚ್ಚು ಹತ್ತಿಕೊಂಡಿತು. ದೂರ್ವಾಸನು ಸಮುದ್ರದೊಳಗೆ ಹೋಗಿ ಅಡಗಿದನು. ಚಕ್ರವು ಸಮುದ್ರದೊಳಗೆ ನುಗ್ಗಿ ಕಲ್ಲೋಲವೆಬ್ಬಿಸಿತು.



ಎಲ್ಲಿಯೂ ರಕ್ಷಣೆಕಾಣದೆ ದೂರ್ವಾಸನು ವೈಕುಂಠಕ್ಕೆ ಓಡಿ ವಿಷ್ಣುವಿನ ಕಾಲಿಗೆ ಬಿದ್ದನು. ಅಂಬರೀಷನನ್ನೆ ಮರೆ ಹೋಗಬೇಕೆಂದು ವಿಷ್ಣು ಅವನಿಗೆ ಹೇಳಿದನು.



ದೂರ್ವಾಸನು ಮತ್ತೆ ಅಂಬರೀಷನ ಬಳಿಗೆ ಬಂದು ಶರಣಾಗತನಾದನು. ಆಗಲೇ ವಿಷ್ಣು ಚಕ್ರವು ದೂರ್ವಾಸನ ಬೆನ್ನು ಬಿಟ್ಟು ಶಾಂತ ವಾಗಿ ಮಾಯವಾಯಿತು. ಒಬ್ಬ ಸಜ್ಜನನಿಂದಾಗಿ ಒಬ್ಬ ದುರಹಂಕಾರಿಗೆ ಬುದ್ಧಿ ಬಂತು.



# ಭರತ

ಪುರಾಣಗಳಲ್ಲಿ ಭರತ ಎಂಬ ಹೆಸರಿನವರು ಅನೇಕರು ಕಾಣುವರು. ಅವರಲ್ಲಿ ಒಬ್ಬ ಭರತನಿಗೆ ತಕ್ಷ ಮತ್ತು ಪುಷ್ಕಲ ಎಂಬ ಇಬ್ಬರು ಕುಮಾರರಿದ್ದರು. ಈ ಭರತ ರಾಜನು ಅನೇಕ ಯುದ್ಧಗಳನ್ನು ಮಾಡಿ ಜಯಗಳಿಸಿ, ಎರಡು ಮಹಾ ನಗರೆಗಳನ್ನು ನಿರ್ಮಿಸಿದನು. ಅವಗಳಿಗೆ ತನ್ನ ಇಬ್ಬರು ಕುಮಾರರನ್ನು ರಾಜರನ್ನಾಗಿ ಮಾಡಿ ಅವರ ಸ್ವಾಧೀನ ಪಡಿಸಿದನು. ಅವರಲ್ಲಿ ತಕ್ಷನ ಮಗನು ಬಹು ಪ್ರಸಿದ್ಧನಾಗಿ, ಅವನ ನಗರವು ತಕ್ಷ ಶಿಲಾ ನಗರವೆಂದು ಖ್ಯಾತಿಗೊಂಡಿತು. ಇದು ಚರಿತ್ರ ಪ್ರಸಿದ್ಧವಾಗಿದೆ. ಹಿಂದೆ ಈ ನಗರದ ಪ್ರಾಂತವನ್ನು ಗಂಧರ್ವದೇಶವೆಂದು ಹೇಳುತ್ತಿದ್ದರು. ಪುಷ್ಕಲನು ಪಾಲಿಸಿದ ದೇಶವು ಪುಷ್ಕಲಾವತಿ ಎಂಬ ಹೆಸರಿನಲ್ಲಿ ಗಾಂಧಾರ ದೇಶದಲ್ಲಿತ್ತು.

ರಾಮಾಯಣದಲ್ಲಿ ದಶರಥ ರಾಜನಿಗೆ ಕೈಕೇಯಿಯಲ್ಲಿ ಹುಟ್ಟಿದ ಮಗನ ಹೆಸರು ಭರತ. ಅವನ ಕಥೆ ರಾಮಾಯಣದಲ್ಲಿ ರಾಮನೊಂದಿಗೆ ಹೊಸೆದುಕೊಂಡು ಸುಪ್ರಸಿದ್ಧವಾಗಿದೆ. ಅವನೂ ರಾಮನ ಪಾದುಕೆಗಳನ್ನಿಟ್ಟುಕೊಂಡು ಒಳ್ಳೆಯ ರೀತಿಯಲ್ಲಿ ರಾಜ್ಯಭಾರಮಾಡಿದವನೇ.

ಮೂರನೆಯ ಭರತನೊಬ್ಬನು ಋಷಭನ ಮಗನಾಗಿ ಹುಟ್ಟಿದವನು. ಅವನ ತಾಯಿಯ ಹೆಸರು ಜಯಂತಿ. ಅವಳ ಮಕ್ಕಳಲ್ಲಿ ಈ ಭರತನೂ ಒಬ್ಬನು. ಅವನಿಗೆ ಕುಶಾವರ್ತ, ಇಲಾವರ್ತ, ಬ್ರಹ್ಮಾವರ್ತ, ಆರ್ಯಾವರ್ತ, ಮಲಯಕೇತು, ಭದ್ರಸೇನ, ವಿದರ್ಭ ಎಂಬವರು ಅವನ ಸಹೋದರರಾಗಿದ್ದರು. ಈ ಭರತನಿಂದಲೇ ನಮ್ಮ ದೇಶಕ್ಕೆ ಭಾರತದೇಶವೆಂದು ಹೆಸರಾಯಿತೆನ್ನುವರು: ಇವನ ಸಹೋದರರು ನಮ್ಮ ದೇಶದ ಬೇರೆ ಬೇರೆ ಪ್ರಾಂತಗಳಲ್ಲಿ ಆಳಿಕೊಂಡಿದ್ದರೆಂದೂ ಅವರ ಹೆಸರುಗಳೇ ಆ ರಾಜ್ಯಗಳಲ್ಲಿ ಬಂದಿತೆಂದೂ ಹೇಳುತ್ತಾರೆ. ಭರತನು ಪಾಲಿಸಿದ ರಾಜ್ಯದ ಹೆಸರು ಅಜನಾಭವೆಂದು.

ಈ ಭರತನು ಒಳ್ಳೆಯ ಭೂತದಯಾಪರನು. ಇವನು ಬಹಳ ಕಾಲ ರಾಜ್ಯಭಾರಮಾಡಿ, ಕಟ್ಟಕಡೆಗೆ ರಾಜ್ಯವನ್ನು ತನ್ನ ಕುಮಾರರಿಗೆ ಕೊಟ್ಟು, ತಪಸ್ಸು ಮಾಡಿ, ದೇಹಬಿಡುವ ನಿಶ್ಚಯದಿಂದ ಅರಣ್ಯಕ್ಕೆ ಹೋದನು. ಒಂದುದಿನ ಅವನು ನದಿಯಲ್ಲಿ ಸ್ನಾನ ಮಾಡುತ್ತಿರುವಾಗ, ಗಬ್ಬದ ಜಿಂಕೆಯೊಂದು ಆ ನದಿಗೆ ಬಂದು ನೀರು ಕುಡಿಯಲು ತೊಡಗಿತು. ಆ ಸಮಯ

ದಲ್ಲಿ ಆಕಾಶದಲ್ಲಿ ಮೋಡಕವಿದು, ಗಾಢಾಂಧಕಾರ ವಾಗಿ, ಭಯಂಕರ ಧ್ವನಿಯಿಂದ ಸಿಡಿಲು ಮೊಳಗಿತು. ಭೀತಿಗೊಂಡ ಜಿಂಕೆ ಅಲ್ಲಿಯೇ ಪ್ರಸವಿಸಿ ಪ್ರಾಣ ಬಿಟ್ಟಿತು. ವೃದ್ಧನಾದ ಭರತರಾಜನು ಆ ಜಿಂಕೆ ಯನ್ನೂ ಅನಾಥವಾದ ಜಿಂಕೆ ಮರಿಯನ್ನೂ ಕಂಡು ಹೃದಯ ದ್ರವಿಸಿದವನಾಗಿ ಆ ಮರಿಯನ್ನು ತನ್ನ ಆಶ್ರಮಕ್ಕೆ ಹೊತ್ತುಕೊಂಡು ಹೋಗಿ ಬಹಳ ಪ್ರೇಮ ದಿಂದ ಪೋಷಿಸ ತೊಡಗಿದನು. ಆತನು ಸಾಯುವ ಕ್ಷಣದಲ್ಲಿ ಕೂಡಾ ಜಿಂಕೆಯನ್ನೇ ನೆನೆದುಕೊಂಡು, ಜಿಂಕೆಯಾಗಿಯೇ ಹುಟ್ಟಿದನಂತೆ !

ಈ ಭರತನಲ್ಲದೆ "ಜಡ ಭರತ" ಎಂಬವನೊಬ್ಬ ನಿದ್ದನು. ಇವನು ಯಾವಾಗಲೂ ಧ್ಯಾನ ಪರವಶ ನಾಗಿರುವನು. ಅಂತೆಯೇ ಮಹಾ ತಪಸ್ವಿ.

ಆದರೆ ಚಿಕ್ಕಪ್ರಾಯದಲ್ಲಿಯೇ ಪ್ರಸಿದ್ಧಿಗೇರಿದವನು ಶಕುಂತಲೆಯ ಮಗನಾದ ಭರತನೇ. ವಿಶ್ವಾಮಿತ್ರ ನಿಂದ ಮೇನಕೆಯಲ್ಲಿ ಹುಟ್ಟಿದ ಮರುಕ್ಷಣದಲ್ಲಿ ಅನಾಥ ಶಿಶುವಾಗಿ ಶಕುಂತಪಕ್ಷಿಗಳಿಂದ ಪೋಷಿಸಲ್ಪಟ್ಟು, ಕಡೆಗೆ ಕಣ್ವಮುನಿ ಆ ಶಿಶುವನ್ನು ತನ್ನ ಆಶ್ರಮದಲ್ಲಿ ತನ್ನ ಮಗಳ ಹಾಗೆ ಬೆಳೆಸಿದವಳೇ ಶಕುಂತಲೆ.

ಒಂದುಸಾರಿ ದುಷ್ಯಂತ ಮಹಾರಾಜನು ಬೇಟೆ ಯಾಡುತ್ತಾ ಕಣ್ವಮುನಿಯ ಆಶ್ರಮಕ್ಕೆ ಬಂದು ಶಕುಂತಲೆಯನ್ನು ಗಾಂಧರ್ವ ವಿಧಿಯಿಂದ ಮದುವೆ ಯಾಗಿ ಹೊರಟು ಹೋದನು. ಆಶ್ರಮದಲ್ಲಿಯೇ ಶಕುಂತಲೆ ಭರತನಿಗೆ ಜನ್ಮವಿತ್ತಳು.

ಈ ಬಾಲಕನು ಇನ್ನೂ ಎಳಸಾಗಿರುವಾಗಲೇ ಮಹಾ ಧೈರ್ಯಶಾಲಿಯಾಗಿ, ಕಾಡಿನ ಪ್ರಾಣಿಗಳನ್ನು ಹಿಡಿದು ಕಟ್ಟಿ ಹಾಕುತ್ತಿದ್ದನು. ಆದುದರಿಂದ ಅವನನ್ನು ಎಲ್ಲರೂ "ಸರ್ವದಮನ" ಎಂದು ಕರೆಯುತ್ತಿದ್ದರು. ಆಶ್ರಮದ ಮುನಿಗಳೇ ಅವನಿಗೆ ಸಕಲ ಶಾಸ್ತ್ರಗಳನ್ನೂ ಕಲಿಸಿಕೊಟ್ಟರು.

ಹೀಗೆ ಭರತನು ಎಲ್ಲಾ ವಿದ್ಯೆಗಳಲ್ಲಿಯೂ ಪ್ರವೀಣ ನಾದ ಮೇಲೆ ಕಣ್ವಮುನಿ ಶಕುಂತಲೆಯನ್ನೂ, ಅವಳ ಮಗನನ್ನೂ ದುಷ್ಯಂತ ರಾಜನ ಬಳಿಗೆ ಕಳುಹಿಸಿದನು. ದುಷ್ಯಂತನು ಮೊದಲು ಆ ತಾಯಿ ಮಗಂದಿರಿಗೂ ತನಗೂ ಯಾವ ಸಂಬಂಧವೂ ಇಲ್ಲವೆಂದು ನಿರಾಕರಿಸಿ ಬಿಟ್ಟನು. ಆಗ ಆಕಾಶವಾಣಿ "ಇವನು ನಿನ್ನ ಮಗ ಭರತನು. ಇವನನ್ನು ನೀನು ಭರಿಸಲೇ ಬೇಕು" ಎಂದು ಆದೇಶವಿತ್ತಿತು. ದುಷ್ಯಂತನಿಗೂ ಪೂರ್ವ ಸ್ಮೃತಿ ಬಂದು, ಶಕುಂತಲೆಯ ಮಗನನ್ನು ತನ್ನ ಮಗನೆಂದು ಸ್ವೀಕರಿಸಿದನು.

ಈ ಭರತನಿಗೆ ಮೂವರು ಪತ್ನಿಯರಿದ್ದರು. ಈ ಪತ್ನಿಯರು ಹಡೆದ ಮಕ್ಕಳು ಸತ್ತುಹೋದು ದರಿಂದ ಭರತನು ಭರದ್ವಾಜನನ್ನು ಸಾಕು ಮಗನಾಗಿ ಮಾಡಿಕೊಂಡನೆಂದು ಭಾಗವತವು ಹೇಳುತ್ತದೆ.





# ಸೋಲರಿಯದ ರಾಜ

ಅನೇಕ ವರ್ಷಗಳ ಹಿಂದೆ ವಿದರ್ಭ ದೇಶವನ್ನು ವಿಜಯಪಾಲನೆಂಬ ರಾಜನು ಪಾಲಿಸಿಕೊಂಡಿದ್ದನು. ಆತನ ಶೌರ್ಯ ಪರಾಕ್ರಮಗಳನ್ನು ಕುರಿತು ಇತರ ದೇಶಗಳವರು ಕಥೆಕಟ್ಟಿ ಹೇಳಿಕೊಳ್ಳುತ್ತಿದ್ದರು. ಅವನ ವಿಜಯಗಳನ್ನು ಕುರಿತು ಕಾವ್ಯಕಟ್ಟಿ ಹಾಡುತ್ತಿದ್ದರು. ಇಷ್ಟಕ್ಕೂ ಕಾರಣವೇನೆಂದರೆ ಅವನು ಪಟ್ಟಕ್ಕೆ ಬಂದ ಮೇಲೆ ಅಪಜಯವನ್ನೇ ಸಂಧಿಸಲಿಲ್ಲ. ಸುತ್ತು ಮುತ್ತಲಿನ ದೇಶಗಳ ರಾಜರು ಅವನೊಡನೆ ಆಗಾಗ ಯುದ್ಧಕ್ಕೆ ಬಂದು ಪ್ರತಿಸಾರಿಯೂ ಸೋತು ಹೋದರು. ಅವನೊಂದಿಗೆ ಯುದ್ಧ ಮಾಡಿ ಸೋಲದ ರಾಜನೇ ಇಲ್ಲವೆಂಬಂತಾಗಿತ್ತು.

ಅಂತಹ ವೀರ ಧೀರನಾದ ವಿಜಯಪಾಲನಿಗೆ ಗಂಡು ಮಕ್ಕಳಿರಲಿಲ್ಲ. ಜಲಜಾದೇವಿ ಎಂಬ ಒಬ್ಬಳು ಮಗಳು ಮಾತ್ರವೇ ಇದ್ದಳು. ಆ ಮಗಳ ಮೇಲೆ ತಂದೆಗೆ ಅತ್ಯಂತ ಅಕ್ಕರೆಯೂ, ಅಭಿಮಾನವೂ ಇದ್ದಿತು. ಅವಳು ಪ್ರಾಯಪ್ರಬುದ್ಧಳಾಗಿ ಬಂದ ಮೇಲೆ, ಅವಳಿಗೆ ಯೋಗ್ಯನಾದ ವರನು ಯಾರೂ ಇಲ್ಲವೆಂದು ವಿಜಯಪಾಲನಿಗೆ ತೋರ ತೊಡಗಿತು. ತನ್ನಂತಹ ಪರಾಕ್ರಮವಂತನ ಮಗಳನ್ನು ಮದುವೆಯಾಗತಕ್ಕ ಪರಾಕ್ರಮಿಯಾದ ವರನು ಎಲ್ಲಿಯೂ ಇಲ್ಲವೆಂಬ ಅನುಮಾನದಿಂದ ವಿಜಯಪಾಲನು ಮಗಳಿಗೆ ಮದುವೆ ಮಾಡಬೇಕೆಂಬ ಮಾತನ್ನೇ ಎತ್ತದೆ ಸುಮ್ಮನಿದ್ದನು. ಸುಂದರಿಯಾದ ಜಲಜಾಕುಮಾರಿಯನ್ನು ಮದುವೆಯಾಗಬೇಕೆಂಬ ಆಸೆ ಅನೇಕಮಂದಿ ರಾಜಕುಮಾರರಿಗಿದ್ದರೂ, ವಿಜಯಪಾಲನ ಮೇಲೆ ಕತ್ತಿಕಟ್ಟಿ ಸೋತವರೇ ಎಲ್ಲರೂ. ವಧುವನ್ನು ಕೇಳಲಿಕ್ಕೆ ಅವರಿಗೂ ಶಂಕೆ. ಆದರಿಂದ ವಿಜಯಪಾಲನು ಕೋಪಿಸಿ ಯುದ್ಧಕ್ಕೆ ಬಂದರೆ, ಸೋಲುವೆವೆಂಬ ಭಯ. ಹೀಗಾಗಿ ಎಲ್ಲರೂ ಸುಮ್ಮನಿದ್ದರು.

ಆದರೆ ಜಯಪುರದ ಯುವರಾಜನಾದ ಮಣಿಭದ್ರನೆಂಬವನು ಯಾವ ಶಂಕೆಯೂ ಭಯವೂ ಇಲ್ಲದ ಬಿಸಿರಕ್ತದ ಹೊಸ ಉತ್ಸಾಹದ ಯುವಕ. ಅವನು ವಿಜಯಪಾಲನ ಮೇಲೆ ದಂಡೆತ್ತಿ ಬರಲು ನಿಶ್ಚಯಿಸಿದನು. ಈ ಮಣಿಭದ್ರನ ತಂದೆ ವಿಜಯಪಾಲನ ಮೇಲೆ ದಂಡೆತ್ತಿ ದೊಡ್ಡ ಯುದ್ಧ ಮಾಡಿ ಸೋತಿದ್ದನು. ಆದುದರಿಂದ ಮಣಿಭದ್ರನು ಚಿಕ್ಕತನದಿಂದಲೇ ಯುದ್ಧ ವಿದ್ಯೆಯಲ್ಲಿ ಪ್ರತ್ಯೇಕ ಶಿಕ್ಷಣ ಪಡೆದು ವ್ಯೂಹ ರಚನೆಗಳಲ್ಲಿ, ಅಸ್ತ್ರ ಶಸ್ತ್ರ ಪ್ರಯೋಗಗಳಲ್ಲಿ ಅನೇಕ



ರಹಸ್ಯಗಳನ್ನೂ, ಯುಕ್ತಿಗಳನ್ನೂ ತಿಳಿದುಕೊಂಡಿದ್ದನು. ವಿಜಯಪಾಲನನ್ನು ಸೋಲಿಸಿ ಜಲಜಾದೇವಿಯನ್ನು ಮದುವೆಯಾಗದೆ ಬಿಡಲಾರೆನೆಂದು ಶಪಥ ಹಾಕಿಕೊಂಡೇ ಯುದ್ಧಕ್ಕೆ ಅಣಿಯಾದನು.

ಮಣಿಭದ್ರನು ತನ್ನ ಸೈನ್ಯದೊಂದಿಗೆ ವಿದರ್ಭದ ಮೇಲೆ ದಂಡೆತ್ತಿ ಬರುವ ಸಮಯಕ್ಕೆ ವಿಜಯಪಾಲನು ರೋಗಗ್ರಸ್ತನಾಗಿ ಹಾಸಿಗೆ ಹಿಡಿದಿದ್ದನು. ಅವನಿಗೆ ವಾರ್ಧಕ್ಯವು ಕವಿದುದರಿಂದ ರಾಜವೈದ್ಯರ ಚಿಕಿತ್ಸೆಗಳು ಅಷ್ಟೇನೂ ಗುಣ ಕೊಡುತ್ತಿರಲಿಲ್ಲ. ಅದರ ಮೇಲೆ ಯುದ್ಧವು ಬಂದು ಬಿದ್ದುದರಿಂದ ಅವನ ಆರೋಗ್ಯವು ಇನ್ನಷ್ಟು ಪಾಳು ಬಿದ್ದಿತು. ಆ ಸ್ಥಿತಿಯಲ್ಲಿಯೂ ಅವನ ಕ್ಷಾತ್ರ ಗುಣವು ಸುಮ್ಮನಿರಲಿಲ್ಲ. ತಾನೇ ಯುದ್ಧರಂಗಕ್ಕೆ ಹೋಗಿ ಅಪ್ಜೈರು ವಿಜಯವನ್ನು ಸಾಧಿಸಿ ಬರುವೆನೆಂದು ಎದ್ದನು. ಮಂತ್ರಿಗಳೂ ವೈದ್ಯರೂ ಮಹಾರಾಜನನ್ನು ಈ ಪ್ರಯತ್ನದಿಂದ ಬಿಡಿಸಲು ಬಹಳ ಪ್ರಯತ್ನಪಟ್ಟರು. ಅದರಿಂದಾಗಿ ರಾಜನು ಮಲಗಿದಲ್ಲೇ ಇದ್ದರೂ ಅವನ ಮನಸ್ಸು ಮತ್ತಿಷ್ಟು ಅಲ್ಲಕಲ್ಲೋಲವಾಯಿತು. ಶತ್ರುಗಳ ವ್ಯೂಹಗಳನ್ನು ಮಲಗಿದಲ್ಲೇ ಅರಿತು, ಅದಕ್ಕೆ ತಕ್ಕ ಪ್ರತಿವ್ಯೂಹಗಳನ್ನು ಹೇಳಿ ಯುದ್ಧರಂಗಕ್ಕೆ ಕಳುಹಿಸುತ್ತಿದ್ದನು. ತನ್ನ ಪ್ರತಿವ್ಯೂಹಗಳು ಭಗ್ನವಾದುದನ್ನು ತಿಳಿದು ಕುಂದಿಹೋಗುತ್ತಿದ್ದನು.

ಈ ವಿಧವಾಗಿ ಕೆಲವು ದಿನಗಳು ಕಳೆದುವು. ಯುದ್ಧರಂಗದಲ್ಲಿ ವಿದರ್ಭ ಸೇನೆಗಳಿಗೆ ಅಪಜಯವು ಹೆಚ್ಚುತ್ತಾ ಬರುತ್ತಿತ್ತು. ಅದರೊಂದಿಗೆ ವಿಜಯಪಾಲ ಮಹಾರಾಜನ ವ್ಯಾಧಿಯ ತೀವ್ರತೆಯೂ ಹೆಚ್ಚುತ್ತಿದ್ದಿತು. ಇನ್ನು ಮಹಾರಾಜನಿಗೆ ವಾಸ್ತವ ಯುದ್ಧ ವಾರ್ತೆಗಳನ್ನು ಹೇಳುವುದು ಅಪಾಯಕಾರಿಯೆಂದು ಮಹಾಮಂತ್ರಿ ನಿಶ್ಚಯಿಸಿ ಅವನೊಂದಿಗೆ ಸುಳ್ಳುಗಳನ್ನೇ ಹೇಳ ತೊಡಗಿದನು. ಇನ್ನು ಮೇಲೆ ಈ ಮಹಾರಾಜನು ಅರುವತ್ತು ಘಳಿಗೆಗಳಿಗಿಂತ ಹೆಚ್ಚು ಹೊತ್ತು ಬದುಕಿರಲಾರನೆಂದು ರಾಜವೈದ್ಯರು ಖಂಡಿತವಾಗಿ ಹೇಳಿಬಿಟ್ಟರು. ಎರಡು ದಿನಗಳಲ್ಲಿ ಮಣಿಭದ್ರನಿಗೆ ಸಂಪೂರ್ಣ ವಿಜಯ ಕೈಗೂಡುವುದೆಂದು ಎಲ್ಲರಿಗೂ ಗೊತ್ತಾಯಿತು. ಆದರೂ ರಾಜನು ಸಾಯುವವರೆಗೂ ತಮ್ಮ ಸೋಲು ಆಗದಂತೆ ವಿದರ್ಭ ಸೈನಿಕರು ಬಹುನಿಕರವಾಗಿ ಹೋರಾಡುತ್ತಿದ್ದರು. ಸಾಯಲಿರುವ ಮಹಾರಾಜನಿಗೆ ಅಪಜಯದ ವಾರ್ತೆಯನ್ನು ಏಕೆ ಹೇಳಬೇಕು ? ಜೀವಿತವಿಡೀ ಅಪಜಯವರಿಯದವನಿಗೆ ಸಾಯುವಾಗ ಏಕೆ ಖೇದವನ್ನುಂಟುಮಾಡಬೇಕು ?

"ಮಹಾರಾಜರೇ ! ನಮ್ಮ ಸೇನೆಗಳು ಶತ್ರು ಸೇನೆಗಳ ರಭಸಕ್ಕೆ ಸ್ವಲ್ಪವೂ ಚಲಿಸದೆ ಅವುಗಳನ್ನು ಪ್ರತಿಭಟಿಸಿ ಹೋರಾಡುತ್ತಿವೆ. ಈಗ ಶತ್ರು ಸೇನೆಯೊಳಗೆ ಬಹಳ ಅಲ್ಲಕಲ್ಲೋಲವೆದ್ದಿದೆ." ಎಂದು ಮಹಾಮಂತ್ರಿ ವಿಜಯಪಾಲನೊಂದಿಗೆ ಹೇಳಿದನು. ಅದನ್ನು ಕೇಳಿ ಅಂತಹ ನೀರಸ ಶರೀರ ಸ್ಥಿತಿಯಲ್ಲಿಯೂ



ವಿಜಯಪಾಲನು ಮುಗುಳುನಗು ಬೀರಿದನು. ಒಂದು ನಿಟ್ಟುಸಿರು ಬಿಟ್ಟು ನಿಃಶಕ್ತಿಯಿಂದ ಕಣ್ಣು ಗಳನ್ನು ಮುಚ್ಚಿದನು. ಸಮಯವು ಕ್ರಮಿಸಿದಂತೆ ರಾಜವೈದ್ಯನ ಲೆಕ್ಕವು ತಪ್ಪಿತು. ಅರುವತ್ತು ಘಳಿಗೆಗಳು ದಾಟಿಹೋದುವು. ವಿಜಯಪಾಲನು ಇನ್ನೂ ಯಥಾ ಸ್ಥಿತನಾಗಿಯೇ ಇದ್ದನು, ಅತ್ತ ಯುದ್ಧವಾದರೋ ಕೊನೆಯ ಘಟ್ಟಕ್ಕೆ ತಲಪುತ್ತಾ ಇದೆ.

ರಾಜನು ಕಣ್ಣು ತೆರೆದು ಬಲಹೀನ ಕಂಠದಿಂದ, ಯುದ್ಧವಾರ್ತೆ ಏನೆಂದು ಕೇಳಿದನು. ಕೂಡಲೇ ಮಹಾಮಂತ್ರಿ "ಮಹಾರಾಜಾ! ವಿಜಯಲಕ್ಷ್ಮಿ ನಮ್ಮನ್ನೇ ವರಿಸಲಿದ್ದಾಳೆ. ಇನ್ನೇನು, ಶತ್ರು ಯಾವ ಕ್ಷಣದಲ್ಲಿಯೂ ಬಿಳಿಜಾಂಡಾ ಎತ್ತಿ ಸಂಧಿಗೆ ಬರ ಬಹುದು." ಎಂದನು.

ಮೊದಲು ವಿಜಯಪಾಲನು ಸಾಯುವನೋ, ಶತ್ರುವೇ ಕೋಟೆಯೊಳಗೆ ಪ್ರವೇಶಿಸುವನೋ ಎಂಬುದು ದೊಡ್ಡ ಪ್ರಶ್ನೆಯಾಯಿತು. ಮಹಾರಾಜನು ಸತ್ತುಹೋದ ಮರುಕ್ಷಣದಲ್ಲಿ ಏನು ನಡೆದರೂ ಮಂತ್ರಿಗೆ ಅಷ್ಟೊಂದು ಬಾಧೆಯಾಗದು. "ನಾವು ಸೋತೆವು" ಎಂಬ ಮಾತನ್ನು ಮಹಾರಾಜನೊಂದಿಗೆ ಹೇಗೆ ಹೇಳುವುದೆಂಬುದೇ ಅವನ ಚಿಂತೆ.

ಅಷ್ಟರಲ್ಲಿ ಮಣಿಭದ್ರನು ತನ್ನ ಸೇನೆಯೊಂದಿಗೆ ಕೋಟೆಯ ಮುಖದ್ವಾರವನ್ನು ಭೇದಿಸಿ ಒಳ ನುಗ್ಗುವ ಗದ್ದಲಕ್ಕೆ ವಿಜಯಪಾಲನು, "ಆಹಾ! ನಾವು ಗೆದ್ದೆವೋ? ಅದೇನು ಕೋಲಾಹಲ?" ಎಂದು ಕೇಳಿದನು.

"ಹೌದು ಮಹಾಪ್ರಭುಗಳೇ. ನಮ್ಮ ಸೇನೆಗಳು ವಿಜಯ ಘೋಷಣವೆಬ್ಬಿಸುತ್ತ ರಣರಂಗದಿಂದ ಹಿಂದಿರುಗಿ ಬರುತ್ತಿವೆ." ಎಂದನು ಮಂತ್ರಿ.

"ನನಗೆ ಮೊದಲೇ ಗೊತ್ತಿತ್ತು. ನನಗೆ ಅಪ ಜಯವೇ ಇಲ್ಲ. ಆಗದು!" ಎಂದು ರಾಜನು ಮತ್ತೆ ಕಣ್ಣು ಮುಚ್ಚಿದನು. ಸ್ವಲ್ಪ ಹೊತ್ತಿಗೆ ರಾಜಭವನ ಗಳೂ, ರಾಜಾಂತಃಪುರವೂ ಮಣಿಭದ್ರನ ವಶವಾಗಿ ಬಿಟ್ಟಿತು. ಮಣಿಭದ್ರನು ವಿದರ್ಭದ ಮಂತ್ರಿಗಳನ್ನೂ, ಸೇನಾಧಿಪತಿಗಳನ್ನೂ ದರ್ಬಾರಿಗೆ ಬರಬೇಕೆಂದು ಆಜ್ಞೆ ಹೊರಡಿಸಿದನು. ಇನ್ನು ಹೋಗದೆ ವಿಧಿ ಇಲ್ಲವೆಂದು ಮಹಾಮಂತ್ರಿ ಮೆಲ್ಲನೆ ಮಹಾರಾಜನ ಬೆರಳಿನಿಂದ ರಾಜಮುದ್ರಿಕೆಯನ್ನು ತೆಗೆಯುವಾಗ, ಮಹಾರಾಜನು ಕಣ್ಣು ತೆರೆದು, "ಏನಿದು?" ಎಂದು ಕೇಳಿದನು.

"ಮಹಾಪ್ರಭುಗಳೇ, ಸೋತುಹೋದ ಶತ್ರುವಿ ನೊಂದಿಗೆ ಸಂಧಿಯ ಒಡಂಬಡಿಕೆ ಮಾಡಿಕೊಳ್ಳ ಬೇಕಾಗಿದೆ. ಒಡಂಬಡಿಕೆ ಪತ್ರದ ಮೇಲೆ ರಾಜ ಮುದ್ರೆ ಹಾಕಬೇಕಲ್ಲವೆ?" ಎಂದನು ಮಂತ್ರಿ.

ಆ ಮಾತು ಕೇಳಿದ ಕೂಡಲೇ ವಿಜಯಪಾಲನಿಗೆ ಅಕಸ್ಮಾತ್ತಾಗಿ ಹೊಸ ಶಕ್ತಿ ಬಂದಹಾಗಾಯಿತು. ಅವನು ಮಂತ್ರಿಯ ಸಹಾಯದಿಂದ ಎದ್ದು ಕುಳಿತು, "ಸಭೆಗೆ ನಾನೇ ಬರುತ್ತೇನೆ. ಎಲ್ಲಾ ಏರ್ಪಾಡು ಗಳನ್ನೂ ಮಾಡಿಸಿರಿ" ಎಂದನು.

ಇದು ಮಹಾಮಂತ್ರಿಯನ್ನು ದಿಗ್ಭ್ರಾಂತಿಗೀಡು ಮಾಡಿತು. ಏನು ಮಾಡಲಿಕ್ಕೂ ತೋರದೆ ಅವನು, "ಅಪ್ಪಣೆ ಪ್ರಭೂ!" ಎಂದು ಹೇಳಿ, ಓಟದ ನಡಿಗೆಯಿಂದ ದರ್ಬಾರು ಮಂದಿರಕ್ಕೆ ಹೋದನು. ಅಲ್ಲಿ ಆಗಲೇ ಮಣಿಭದ್ರನು ಸಿಂಹಾಸನದ ಮೇಲೆ ಆರೋಹಿಸಿಕೊಂಡಿದ್ದು, ಒಡಂಬಡಿಕೆಯ ಪತ್ರವನ್ನು ಬರೆಯಿಸುತ್ತಿದ್ದನು.

"ಜಯಶಾಲಿ ಮಣಿಭದ್ರ ಪ್ರಭು! ಒಂದು ವಿನಂತಿ." ಎಂದು ಮಹಾಮಂತ್ರಿ ನಡೆದ ಸಂಗತಿಯನ್ನು ಹೇಳಿ, ವಿಜಯಪಾಲನ ಪರಿಸ್ಥಿತಿಯನ್ನು ವಿಶದಪಡಿಸಿ, "ನಮ್ಮ ರಾಜರು ಇನ್ನು ಒಂದು ಗಂಟೆ, ತಪ್ಪಿದರೆ ಎರಡು ಗಂಟೆಗಳವರೆಗಷ್ಟೇ ಬದುಕಿರಬಹುದು. ಅಷ್ಟರವರೆಗೆ ಅವರಿಗೆ ನಿಜ ಸಂಗತಿ ತಿಳಿಯದಂತೆ ಕಾಪಾಡಿದರೆ, ನೀವೂ, ನಾವೂ ನಮ್ಮ ವಿದರ್ಭ ಪ್ರಜೆಗಳೂ ತಮಗೆ ಯಾವಜ್ಜೀವ ಕೃತಜ್ಞರಾಗಿರುತ್ತೇವೆ" ಎಂದು ಪ್ರಾರ್ಥಿಸಿಕೊಂಡನು. ಮಣಿಭದ್ರನು ಮೊದಲು ರೇಗಿಕೊಂಡರೂ, ಯುವಕನಾದುದರಿಂದ ವಿನೋದ ನೋಡೋಣವೆಂದು ಕಡೆಗೆ ಒಪ್ಪಿದನು.

ಆ ಸಮಯದಲ್ಲಿ ಸೇವಕರಿಂದ ನಡೆಯಿಸಿಕೊಳ್ಳಲ್ಪಡುತ್ತ ಅಂತಃಪುರದಿಂದ ವಿಜಯಪಾಲ ಮಹಾರಾಜನು ದರ್ಬಾರಿಗೆ ಬಂದನು. ಅಷ್ಟರೊಳಗೆ ಮಣಿಭದ್ರನು ಸಿಂಹಾಸನದಿಂದೆದ್ದು ಬದಿಯಲ್ಲಿ ನಿಂತಿದ್ದನು. ವಿಜಯಪಾಲನು ತನ್ನ ಸಿಂಹಾಸನದ ಮೇಲೆ ಮೆಲ್ಲನೆ ಹತ್ತಿ ಕುಳಿತು, ಪಕ್ಕದಲ್ಲಿ ಕೈಕಟ್ಟಿ ನಿಂತಿದ್ದ ಮಣಿಭದ್ರನನ್ನು ನೋಡಿದನು.

"ಅಪ್ಪಾ! ನಿನ್ನ ಯುದ್ಧ ತಂತ್ರಗಳನ್ನೂ ವ್ಯೂಹಗಳನ್ನೂ ಕೇಳಿ ತುಂಬಾ ಸಂತೋಷಪಟ್ಟೆನು. ನೀನು ಮಹಾ ಯೋಧನು. ನಾನು ಮಂಚದಲ್ಲಿ ಹಾಸಿಗೆ ಹಿಡಿದಿದ್ದು, ನಿನ್ನ ವ್ಯೂಹಗಳಿಗೆ ಪ್ರತಿ ವ್ಯೂಹಗಳನ್ನು ತಿಳಿಸುತ್ತಾ ಇದ್ದುದರಿಂದಲೇ ನೀನು ಸೋತಿರುವಿ. ಇಲ್ಲದಿದ್ದರೆ ನೀನೇ ಗೆಲ್ಲುತ್ತಿದ್ದಿ. ನನ್ನೊಂದಿಗೆ ಸೋತರೂ ಅದು ನಿನಗೆ ಅಗೌರವವಲ್ಲ. ಇಂಥ ವೀರನೊಂದಿಗೆ ನಾನು ಗೌರವದ ಸಂಧಿಯನ್ನೇ ಬಯಸುತ್ತೇನೆ. ನನ್ನ ಮಗಳನ್ನು ನಿನಗೆ ಕೊಟ್ಟು ಮದುವೆಮಾಡುತ್ತೇನೆ. ನೀನು ಸೋತರೂ ಇನ್ನು ಮೇಲೆ ಈ ರಾಜ್ಯವು ನಿನ್ನದೇ!" ಎಂದನು ವಿಜಯಪಾಲ ನಗುತ್ತಾ.

ಮಣಿಭದ್ರನು ಮೊದಲು ಬೆರಗಾದರೂ ಸಭೆಗೆ ಬಂದು ನಿಂತ ಜಲಜಾದೇವಿಯನ್ನು ನೋಡಿ ಮಂದಹಾಸ ಬೀರಿದನು. ಆ ಮೇಲೆ ಇಬ್ಬರಿಗೂ ಮಹಾ ವೈಭವದಿಂದ ಮದುವೆಯೂ ಆಯಿತು.

ವಿಜಯಪಾಲನು ಸಾಯಲಿಲ್ಲ. ಬೇಗದಲ್ಲಿ ಜನಿಸಿದ ಮೊಮ್ಮಗನನ್ನು ಮಡಿಲಲ್ಲಿಟ್ಟುಕೊಂಡು ಆಡಿಸುತ್ತಾ ಆನಂದವನ್ನು ಅನುಭವಿಸಿಕೊಂಡಿದ್ದನು.



# ಉಪಕಾರಿ

ಒಂದುಸಾರಿ ಶಿಳ್ಳಂಗೇರಿ ಗ್ರಾಮಕ್ಕೆ ಭಾರಿ ನೆರೆ ಬಂದಿತು. ಎಲ್ಲರೂ ಊರನ್ನೇ ಬಿಟ್ಟು ಸುರಕ್ಷಿತವಾದ ಸ್ಥಳಕ್ಕೆ ಹೋಗುತ್ತಿದ್ದರು.

ಅದಕ್ಕಾಗಿ ಸಿದ್ಧವಾಗಿದ್ದ ದೊಡ್ಡದಾದ ಒಂದು ದೋಣಿಯಲ್ಲಿ ಏರಿಕೊಂಡು ಹೋಗಬೇಕಾಗಿತ್ತು. ಒಂದೇ ಒಂದು ದೋಣಿ ಇದ್ದುದರಿಂದ ಎಲ್ಲರೂ ಅದರಲ್ಲೇ ಏರಿದರು.

ಆದರೆ ಸೋಮಯ್ಯನೆಂಬ ಜಿಪುಣನಾದ ಧನಿಕನೂ, ಒಬ್ಬ ಭಿಕ್ಷುಕನೂ ಉಳಿದುಹೋದರು.

ಸೋಮಯ್ಯನು ತನ್ನ ಸಂಪತ್ತುಗಳಲ್ಲಿ ಒಂದು ಕರಿಮಣಿ ಕಾಳು ಕೂಡಾ ಬಿಟ್ಟುಹೋಗದಂತೆ ಕಟ್ಟಿಕೊಂಡು ಹೊರಡುವಾಗ ಹೊತ್ತಾಗಿ ಹೋಗಿತ್ತು. ಭಿಕ್ಷುಕನಿಗೆ ಕಾಲು ನೋವಿನಿಂದ ಬೇಗನೇ ನಡೆಯಲಾಗಲಿಲ್ಲ. ಕೊನೆಗೆ ಬಂದ ಸೋಮಯ್ಯನೂ, ಭಿಕ್ಷುಕನೂ ದೋಣಿಯಲ್ಲಿ ಏರಲು ನೋಡಿದರು.

ಆಗ ದೋಣಿಯವನು, "ಇನ್ನು ಒಬ್ಬ ಮನುಷ್ಯನಿಗೆ ಮಾತ್ರ ದೋಣಿಯಲ್ಲಿ ಜಾಗವಿದೆ. ತಪ್ಪಿದರೆ ದೋಣಿ ಮುಳುಗೀತು. ಈ ಇಬ್ಬರಲ್ಲಿ ಯಾರನ್ನು ಏರಿಸಿಕೊಳ್ಳಬೇಕೆಂದು ದೋಣಿಯಲ್ಲಿದ್ದವರೇ ನಿರ್ಣಯಿಸಿ ಏರಿಸಿಕೊಳ್ಳಿರಿ." ಎಂದನು.

ದೋಣಿಯಲ್ಲಿದ್ದವರು ಸ್ವಲ್ಪ ಆಲೋಚಿಸಿದರು.

"ಯಾರಿಗೂ ಯಾವ ಉಪಯೋಗವೂ ಇಲ್ಲದವನನ್ನು ಬಿಟ್ಟುಬಿಡೋಣ. ಭಿಕ್ಷುಕನೇ ಏರಲಿ" ಎಂದರು ಗ್ರಾಮಸ್ಥರು.

"ಎಂಥ ಹುಚ್ಚು ನಿರ್ಣಯ ನಿಮ್ಮದು ? ನಾನು ಗ್ರಾಮದಲ್ಲೇ ದೊಡ್ಡ ಧನಿಕ. ನನಗೂ ನನ್ನ ಸಾಮಾನುಗಳಿಗೂ ಸ್ಥಳ ಬೇಕೇ ಬೇಕು. ಯಾರನ್ನಾದರೂ ಇಳಿಸಿ ನನ್ನನ್ನು ಏರಿಸಿಕೊಳ್ಳಿ. ನಾನು ಆ ಭಿಕ್ಷುಕನಿಗಿಂತ ಕಡಿಮೆಯವನೋ ?" ಎಂದು ಕೇಳಿದ ಸೋಮಯ್ಯ.

"ನಿಜವಾಗಿಯೂ ! ಆ ಭಿಕ್ಷುಕ ನಮ್ಮಿಂದ ಭಿಕ್ಷೆ ಹಾಕಿಸಿಕೊಂಡು ಪುಣ್ಯ ಸಂಪಾದಿಸಲು ಉಪಯೋಗ ಬೀಳುತ್ತಾನೆ. ನಿನ್ನಿಂದ ಯಾರಿಗೇನು ಉಪಕಾರವಾಯಿತು ?" ಎಂದರು ದೋಣಿಯಲ್ಲಿದ್ದವರು.





# ಹೆಸರಿನ ಮಹಿಮೆ

ಒಂದು ಊರಿನಲ್ಲಿ ಗೋಪಣ್ಣನೆಂಬವನು ಹಾಗೇನೂ ಹೇಳಿಕೊಳ್ಳುವಷ್ಟು ಸ್ಥಿತಿವಂತನಲ್ಲ. ಅವನಿಗೊಂದು ಉದ್ಯೋಗವೂ ಇರಲಿಲ್ಲ. ಕುಳಿತು ತಿನ್ನುತ್ತಾ ಇದ್ದುದೂ ಕರಗಿಹೋಗುವ ಪರಿಸ್ಥಿತಿ ಯುಂಟಾಗಿತ್ತು. "ಹೀಗಿದ್ದರೆ ಮುಂದೆ ಹೇಗೆ ಹೇಳಿ? ಏನಾದರೂ ವ್ಯಾಪಾರ ಶುರು ಮಾಡಿರಿ" ಎಂದು ಅವನ ಹೆಂಡತಿ ಕಾಟಕೊಡಲಾರಂಭಿಸಿದಳು, ವ್ಯಾಪಾರ ಮಾಡ ಬೇಕಾದರೂ ದೊಡ್ಡ ಮೊತ್ತದ ಮೂಲಧನ ಬೇಕಲ್ಲಾ! ಗೋಪಣ್ಣನ ಹತ್ತಿರ ಇನ್ನು ಉಳಿದಿರುವುದು ಕೇವಲ ಇನ್ನೂರು ರೂಪಾಯಿ ಮಾತ್ರವೇ.

ಅಷ್ಟೊಂದು ಚಿಕ್ಕ ಮೊತ್ತದಿಂದ ಏನು ವ್ಯಾಪಾರ ಮಾಡುವುದೋ ಎಂದು ಅವನು ಆಲೋಚಿಸಿ ಕೊಂಡಿರುವಾಗ, ಸುಮಾರು ಐವತ್ತು ವಯಸ್ಸಿನ ಹೆಂಗುಸೊಬ್ಬಳು ಬಿಸಿಲಿನಲ್ಲಿ ನಡೆದು ಬಂದು, ಗೋಪಣ್ಣನ ಮನೆಯ ಜಗಲಿಯಲ್ಲಿ ಉಸ್ಸೆಂದು ಕುಳಿತು, ಕುಡಿಯಲು ಸ್ವಲ್ಪ ನೀರು ಕೇಳಿದಳು.

ಅವಳು ಗೋಪಣ್ಣನ ಹೆಂಡತಿ ತಂದುಕೊಟ್ಟ ನೀರನ್ನು ಕುಡಿದು, ತಾನು ಗಂಡನನ್ನು ಕಳೆದುಕೊಂಡ, ಮಕ್ಕಳು ಮರಿಗಳಿಲ್ಲದ ವಿಧವೆಯೆಂದೂ, ಏನಾದರೂ ಕೆಲಸಕ್ಕೆ ತನ್ನನ್ನು ಸಹಾಯಕ್ಕಾಗಿ ಇಟ್ಟುಕೊಳ್ಳಿರೆಂದೂ, ತನ್ನ ಹೆಸರು ಲಚ್ಚಮ್ಮನೆಂದೂ ಹೇಳಿದಳು.

"ನಮಗೇ ದಿನ ಹೋಗುವುದು ಅಷ್ಟಕ್ಕಷ್ಟರಲ್ಲೇ ಇರುವಾಗ ನಿನ್ನನ್ನು ಕೂಡ ನಾವೇನು ಇಟ್ಟು ಕೊಂಡೇವು ಹೇಳಮ್ಮ. ಏನಾದರೂ ವ್ಯಾಪಾರ ಮಾಡೋಣವೆಂದರೂ ಕೈತುಂಬಾ ಹಣವಿಲ್ಲದೆ ಪೇಚಾಡಿಕೊಂಡಿದ್ದೇವೆ. ಅಲ್ಲದೆ ಇರುವವರೇ ನಾವಿಬ್ಬರು. ನಮಗೆ ಇನ್ನೊಬ್ಬರ ಸಹಾಯವೇಕೆ ಬೇಕು ಹೇಳಮ್ಮ?" ಎಂದ ಗೋಪಣ್ಣ.

"ನನಗಾಗಿ ನೀವೇನೂ ಖರ್ಚು ಮಾಡಬೇಕಾಗಿಲ್ಲ ಬಿಡಿ. ನೀವು ಅನ್ನಬಸಿದ ಗಂಜಿನೀರು ಉಪ್ಪು ಹಾಕಿ ಕೊಟ್ಟರೂ ಸಾಕು, ಸ್ವಲ್ಪ ಮಾತ್ರ ಹಣದಿಂದ ಒಳ್ಳೆಯ ವ್ಯಾಪಾರ ಸಾಗಿಸುವುದಾದರೆ ನಾನು ನಿಮಗೆ ಸಹಾಯವೇ ಮಾಡೇನು. ನನ್ನ ಕೈಯಲ್ಲಿ ಅಷ್ಟೂ ಇಲ್ಲದ್ದರಿಂದ ಹೀಗಾಗಿದ್ದೇನೆ," ಎಂದಳು ಲಚ್ಚಮ್ಮ.

"ಅದೇನು ವ್ಯಾಪಾರವೋ?" ಎಂದು ಕೇಳಿದ ಗೋಪಣ್ಣ ಆಸಕ್ತಿಯಿಂದ.

"ಈಗ ನೋಡಿ ಅಣ್ಣಯ್ಯಾ, ಒಳ್ಳೆಯ ಮಾವಿನ ಕಾಯಿ ಬರತೊಡಗಿದೆ. ನಾನು ಮೂರು ನಾಲ್ಕು

ಎಂ. ಕೆ. ಈಶ್ವರರಾವ್

ಬಗೆಯ ಉಪ್ಪಿನಕಾಯಿ ಹಾಕುತ್ತೇನೆ. ಸಾಸಿವೆ ಉಪ್ಪಿನ ಕಾಯಿಗೆ ಅಷ್ಟೇನೂ ದುಬಾರಿ ಮೂಲಧನ ಬೇಕಾಗಿಲ್ಲ. ನೀವೇ ಆಲೋಚಿಸಿ ನೋಡಿ" ಎಂದಳು ಲಚ್ಚಮ್ಮ.

ಅವಳ ಆಲೋಚನೆ ಗೋಪಣ್ಣನ ತಲೆಯಲ್ಲಿ ಹೊಕ್ಕು ತುಸು ಹರಿಯಿತು. ಅವನು ಲಚ್ಚಮ್ಮನನ್ನು ಮನೆಯಲ್ಲಿರಿಸಿಕೊಂಡು, ಸಾಸಿವೆ ಉಪ್ಪಿನ ಕಾಯಿಗೆ ಬೇಕಾದ ಸಾಮಗ್ರಿಗಳನ್ನು ಲಚ್ಚಮ್ಮ ಹೇಳಿದ ಪ್ರಕಾರ ತರಿಸಿದನು. ಲಚ್ಚಮ್ಮನೇ ಉಪ್ಪಿನ ಕಾಯಿ ಹಾಕಿದಳು. ಉಪ್ಪಿನಕಾಯಿ ಹಾಕುವುದರಲ್ಲಿ ಲಚ್ಚಮ್ಮ ತುಂಬಾ ಗಟ್ಟಿಗಿತ್ತಿಯೆನ್ನಲು ಏನೂ ಸಂದೇಹವಿರಲಿಲ್ಲ.

ಗೋಪಣ್ಣ ಉಪ್ಪಿನ ಕಾಯಿಯನ್ನು ಸೀಸೆಗಳಲ್ಲಿ ತುಂಬಿಸಿ ಆ ಸೀಸೆಗಳನ್ನು ದೂಡುವ ಗಾಡಿಯಲ್ಲಿಟ್ಟುಕೊಂಡು, " ಲಚ್ಚಮ್ಮನ ಉಪ್ಪಿನಕಾಯಿ ! ಲಚ್ಚಮ್ಮನ ಉಪ್ಪಿನಕಾಯಿ ! " ಎಂದು ಕೂಗುತ್ತ ನಾಲ್ಕು ಬೀದಿಗಳಲ್ಲಿ ತಿರುಗಿ ಮಾರಾಟಕ್ಕೆ ತೊಡಗಿದನು. ಬೇಗದಲ್ಲೇ ಎಲ್ಲಾ ಸೀಸೆಗಳೂ ಬಿಕರಿಯಾಗಿ ಹೋದುವು. ಇನ್ನೂ ಬೇಕೆಂಬ ಬೇಡಿಕೆಗಳುಂಟಾದುವು. ಒಬ್ಬರು ಇನ್ನೊಬ್ಬರೊಂದಿಗೆ ಆ ಉಪ್ಪಿನಕಾಯಿಯ ರುಚಿಯನ್ನು ಹೊಗಳಿ ಕೊಂಡರು. ಇದರಿಂದ ಗೋಪಣ್ಣನಿಗೆ ಒಳ್ಳೆಯ ಲಾಭ ಬಂದಿತು.

ಮಾವಿನಕಾಯಿಯ ಕಾಲ ಮುಗಿಯುವಷ್ಟರೊಳಗೆ ಲಚ್ಚಮ್ಮ ಸುಮ್ಮನಾಗಿಬಿಡಲಿಲ್ಲ. ಅವಳು ನಿಂಬೇ ಕಾಯಿಗಳಿಂದಲೂ, ಹುಣಸೇಕಾಯಿಗಳಿಂದಲೂ, ನೆಲ್ಲಿ ಕಾಯಿಗಳಿಂದಲೂ ಬಗೆಬಗೆಯ ಉಪ್ಪಿನಕಾಯಿಗಳನ್ನು ಹಾಕಿದಳು. ಲಚ್ಚಮ್ಮನ ನಿಂಬೇ ಉಪ್ಪಿನಕಾಯಿ, ಲಚ್ಚಮ್ಮನ ನೆಲ್ಲಿಂಡಿ, ಲಚ್ಚಮ್ಮನ ಹುಣಸೇ ತೊಕ್ಕು ಎಂದೆಲ್ಲಾ ಕೂಗುತ್ತಾ ಗೋಪಣ್ಣ ಉತ್ಸಾಹದಿಂದ ವ್ಯಾಪಾರ ಮಾಡಿದ.

ಒಂದು ವರ್ಷ ಕಳೆಯುವಷ್ಟರಲ್ಲಿ ಗೋಪಣ್ಣನ ಉಪ್ಪಿನಕಾಯಿಯ ಉದ್ಯಮ ತುಂಬಾ ಅಭಿವೃದ್ಧಿಗೇರಿತು. ಅವನು ಉಪ್ಪಿನಕಾಯಿಗಳ ಅಂಗಡಿಯನ್ನೇ ಇಟ್ಟುಬಿಟ್ಟನು. ಅಂಗಡಿ ತುಂಬಾ ಅರೆಗಳು, ಅವುಗಳಲ್ಲಿ



ಸೀಸೆಗಳ ತುಂಬಾ ಬಗೆ ಬಗೆಯ ಉಪ್ಪಿನಕಾಯಿಗಳು. ಎಲ್ಲದರ ಮೇಲೆಯೂ ಚೀಟುಗಳನ್ನು ಅಂಟಿಸಿ ದೊಡ್ಡ ಅಕ್ಷರಗಳಲ್ಲಿ "ಲಚ್ಚಮ್ಮನ ಉಪ್ಪಿನಕಾಯಿಗಳು" ಎಂದು ಬರೆದು. ಚಿಕ್ಕ ಅಕ್ಷರಗಳಲ್ಲಿ ಉಪ್ಪಿನ ಕಾಯಿಯ ಹೆಸರನ್ನು ಬರೆದನು. ಉಪ್ಪಿನಕಾಯಿಗಳಿಗೆ ತುಂಬಾ ಗಿರಾಕಿ ಬಂದಿತು. ಲಚ್ಚಮ್ಮನ ಹೆಸರೂ ಮಾರ್ಮೊಳಗಿತು.

ಲಚ್ಚಮ್ಮನಿಗೆ ಅಷ್ಟು ದೊಡ್ಡ ಹೆಸರು ಬರುವುದನ್ನು ಗೋಪಣ್ಣನ ಹೆಂಡತಿಗೆ ಸಹಿಸಲಾಗಲಿಲ್ಲ. "ವ್ಯಾಪಾರ ನಿಮ್ಮದು, ಹಣಹಾಕಿದವರೂ ನೀವು. ನಡುವೆ ಈ ಅನಾಥ ಲಚ್ಚಮ್ಮನ ಹೆಸರೇಕೆ ಕರ್ಮ? ಗೋಪಣ್ಣವರ ಉಪ್ಪಿನಕಾಯಿ ಅಂತ ಮಾರಾಟ ಮಾಡಿ" ಎಂದಳು ಗಂಡನೊಂದಿಗೆ.

ಹೆಂಡತಿಯ ಮಾತನ್ನು ಕೇಳುವ ಅಭ್ಯಾಸವಿರುವ ಗೋಪಣ್ಣ ತನ್ನ ಅಂಗಡಿಗಳಲ್ಲಿದ್ದ ಸೀಸೆಗಳ ಹಳೆಯ ಚೀಟುಗಳನ್ನು ತೆಗೆದುಹಾಕಿ, ಹೊಸ ಚೀಟುಗಳ ಮೇಲೆ "ಗೋಪಣ್ಣವರ ಉಪ್ಪಿನಕಾಯಿಗಳು" ಎಂದು ಬರೆದು ಅಂಟಿಸಿದನು. ಕೂಡಲೇ ಏನೋ ಶಾಪ ತಗಲಿದ ಹಾಗೆ ವ್ಯಾಪಾರಕ್ಕೆ ಪೆಟ್ಟು ಬಿದ್ದಿತು. ಲಚ್ಚಮ್ಮನ ಉಪ್ಪಿನ ಕಾಯಿಗಳನ್ನು ಕೊಂಡು ಕೊಳ್ಳಲು ಬಂದವರು, ಗೋಪಣ್ಣವರ ಉಪ್ಪಿನಕಾಯಿಗಳನ್ನು ಕೊಂಡುಕೊಳಲು ಉತ್ಸಾಹ ತೋರಿಸಲಿಲ್ಲ. ಹೆಸರು ಬದಲಾಯಿತೇ ಹೊರತು ಇದು ಲಚ್ಚಮ್ಮನ ಉಪ್ಪಿನಕಾಯಿಯೇ ಎಂದು ಗೋಪಣ್ಣ ಹೇಳಿ ನೋಡಿದರೂ ಪ್ರಯೋಜನವಿಲ್ಲದೆ ಹೋಯಿತು.

ಹೆಂಡತಿ ಬುದ್ಧಿಗೇಡಿ ಆಲೋಚನೆ ಹೇಳಿದಳೆಂದು ಗೋಪಣ್ಣನಿಗೆ ತಿಳಿಯಿತು. ಹೆಂಡತಿಯನ್ನು ಬೈದು, ಸೀಸೆಗಳ ಮೇಲಿನ ಚೀಟುಗಳನ್ನು ತೆಗೆದು ಬಿಸುಟು ಮೊದಲಿನಂತೆ "ಲಚ್ಚಮ್ಮನ ಉಪ್ಪಿನ ಕಾಯಿಗಳು" ಎಂದು ಬರೆದು ಅಂಟಿಸಿದನು. ಅದರಿಂದ ಅವನ ವ್ಯಾಪಾರವು ಮತ್ತೆ ಮರುಕಳಿಸಿಕೊಳ್ಳುವಂತಾಯಿತು.

ಹೀಗೆ ದಾರಿಯಲ್ಲಿ ಸ್ವಲ್ಪ ಜಾರಿಹೋದರೂ, ಮತ್ತೆ ಸುಗಮವಾಗಿ ಉಪ್ಪಿನಕಾಯಿಗಳ ವ್ಯಾಪಾರಸಾಗುತ್ತಾ ಇರಲು. ಸಣ್ಣದೊಂದು ಕಾಯಿಲೇಯೇ ಜೋರಾಗಿ ಲಚ್ಚಮ್ಮ ಆಕಸ್ಮಾತ್ ತೀರಿಹೋದಳು. ತನ್ನ ಜೀವನದ ಗಾಡಿಯೇ ಮುರಿದು ಹೋಯಿತೆಂದು ಗೋಪಣ್ಣ ಚಿಂತೆಯಿಂದ ತಲೆಯನ್ನು ಕೈಯಲ್ಲಿ ಹೊತ್ತು ಕುಳಿತುಬಿಟ್ಟನು.

ಆಗ ಅವನ ಹೆಂಡತಿ ಸಮಾಧಾನ ಹೇಳುತ್ತ, "ಲಚ್ಚಮ್ಮ ಹೋದರೇನು ಬಿಡೀ! ಅವಳ ಹೆಸರೇ ನಮಗೆ ಬೇಕಾದ್ದು! ಇಷ್ಟು ಕಾಲದಲ್ಲಿ ಲಚ್ಚಮ್ಮನಿಂದ ನಾನು ಎಲ್ಲಾ ಬಗೆಯ ಉಪ್ಪಿನಕಾಯಿ, ಚಟ್ನಿ, ತೊಕ್ಕುಗಳನ್ನೆಲ್ಲಾ ಮಾಡಲು ಕಲಿತಿದ್ದೇನೆ" ಎಂದಳು. ಈಸಾರಿ ಅವಳ ಮಾತು ಅಕ್ಷರಶಃ ನಿಜವೇ ಆಯಿತು.



# ಹಸಿವೆ

**ಈ**ಶ್ವರಯ್ಯನ ನಂಬುಗೆಯ ಬಂಟನಾದ ನಂದಿ ಎಂಬವನು, ಯಜಮಾನನು ಹೇಳುವ ಎಲ್ಲಾ ಕೆಲಸಗಳನ್ನೂ ಸಲೀಸಾಗಿ ಮಾಡುತ್ತಿದ್ದನು.

ಆದರೆ ಅವನ ಹಸಿವೆ ಮಾತ್ರ ಬಹಳ ದೊಡ್ಡದು. ಎಷ್ಟು ಬಡಿಸಿದರೂ ಅವನಿಗೆ ಸಾಲುತ್ತಿದ್ದಿಲ್ಲ. ಆದುದರಿಂದ ನಂದಿ ಈಶ್ವರಯ್ಯನ ಮನೆಯಲ್ಲಿ ಮಾತ್ರವಲ್ಲದೆ, ಹೊಟ್ಟೆಗೆ ಹಾಕುವ ಯಾರ ಮನೆಯಲ್ಲಾದರೂ ಚಾಕರಿ ಮಾಡುತ್ತಿದ್ದನು.

ಇದು ಈಶ್ವರಯ್ಯನಿಗೆ ಹಿಡಿಸಲಿಲ್ಲ. ಅವನ ಹಸಿವೆಯನ್ನೇ ಹೋಗಲಾಡಿಸಿಬಿಟ್ಟರೆ ತನ್ನ ಮನೆಯಲ್ಲೇ ಇದ್ದು ಕೆಲಸ ಮಾಡಿಕೊಂಡಿರುತ್ತಾನೆಂದುಕೊಂಡು, ಈಶ್ವರಯ್ಯ ಒಬ್ಬರು ಸ್ವಾಮಿಗಳ ಬಳಿಗೆ ಹೋಗಿ, ತಾತ್ಕಾಲಿಕ ವಾಗಿ ಹಸಿವೆಯನ್ನು ಹೋಗಲಾಡಿಸುವ ಉಪಾಯವನ್ನು ಕೇಳಿದನು.

ಸ್ವಾಮಿಗಳು ತಲೆದೂಗುತ್ತಾ ಯೋಚಿಸಿ ಏನೋ ಒಂದು ಪುಡಿಯನ್ನು ತೆಗೆದು ಕೊಟ್ಟರು. ಅದನ್ನು ತಂದು ನೀರಿನಲ್ಲಿ ಬೆರೆಸಿ ನಂದಿಗೆ ಕುಡಿಸಿಬಿಟ್ಟನು ಈಶ್ವರಯ್ಯ.

ಆಮೇಲೆ ನಂದಿ ಕೆಲಸಕ್ಕೆ ಏಳುವುದನ್ನೇ ಬಿಟ್ಟನು. ಹಸಿವೆಯಿಲ್ಲದ ಮೇಲೆ ಆಹಾರ ಬೇಡವಾಯಿತು. ಆಹಾರವೇ ಬೇಡದಿದ್ದ ಮೇಲೆ ಕೆಲಸ ಮಾಡುವ ಅಗತ್ಯವೇನಿದೆ ?

ಅಸಲಿಗೇ ಮೋಸ ಬಂತು ! ಈಶ್ವರಯ್ಯ ಅದರ ಪರಿಹಾರದ ಔಷಧಕ್ಕಾಗಿ ಮತ್ತೆ ಸ್ವಾಮಿಗಳ ಬಳಿಗೆ ಓಡಿ, ಬೇಡಿ ಪಡೆದುಕೊಂಡು ಬಂದನು.





# ರೋಗರಹಸ್ಯ

ಒಂದು ಊರಿನಲ್ಲಿ ರಾಜಶೇಖರನೆಂಬ ವೈದ್ಯನಿದ್ದನು. ಅವನು ಒಳ್ಳೆಯ ವಂಶದಲ್ಲಿ ಹುಟ್ಟಿದವನಾದರೂ, ತನ್ನ ತಂದೆ ತಾಯಿಗಳನ್ನು ಕಳೆದುಕೊಂಡು, ಅವರ ಮೇಲೆ ಇದ್ದ ಆಸ್ತಿಯನ್ನೆಲ್ಲಾ ಸಾಲದವರಿಗೆ ಬಿಟ್ಟು ಕೊಟ್ಟು ತಕ್ಷಶಿಲೆಗೆ ಹೋಗಿ, ಅಲ್ಲಿಯ ಉತ್ತಮ ಗುರುವಿನ ಬಳಿಯಲ್ಲಿ ವೈದ್ಯಕೀಯವನ್ನು ಕಲಿತು ಕೊಂಡವನು. ಆ ವಿದ್ಯೆಯಲ್ಲಿ ಉತ್ತಮ ತರಗತಿಯಲ್ಲಿ ಉತ್ತೀರ್ಣನಾಗಿ, ರುದ್ರಪುರವೆಂಬ ಸಣ್ಣ ಪಟ್ಟಣದಲ್ಲಿ ವೈದ್ಯ ವೃತ್ತಿಯನ್ನು ಪ್ರಾರಂಭಿಸಿದ್ದನು. ಅವನ ಬಳಿಯಲ್ಲಿ ರಾಮಶರ್ಮನೆಂಬ ಶಿಷ್ಯನು ಸೇರಿಕೊಂಡು ವೈದ್ಯಕೀಯವನ್ನು ಕಲಿಯಲು ತೊಡಗಿದನು.

ಒಂದುದಿನ ಕುಲಶೇಖರನೆಂಬವನು ತನ್ನ ಕುಮಾರಿ ಮೋಹಿನಿ ಎಂಬವಳನ್ನು ಕರೆದುಕೊಂಡು ಬಂದು ರಾಜಶೇಖರನಿಗೆ ತೋರಿಸಿದನು. ಆಗ ತಾನೇ ಯೌವನದ ಹೊಸ್ತಿಲಿಗೆ ಕಾಲಿಟ್ಟಿರುವ ಮೋಹಿನಿ ತುಂಬಾ ಚೆಲುವೆಯಾಗಿಯೂ ಇದ್ದಳು. ಅವಳಿಗೆ ಮದುವೆಮಾಡಬೇಕೆಂದು ತಂದೆ ಆಲೋಚಿಸುವಾಗ, ಅವಳ ಕಾಲಿನಲ್ಲಿ ಏನೋ ಮಚ್ಚೆಗಳು ಕಾಣಿಸಿದುವು. ಅದನ್ನು ನೋಡಿ ತಂದೆ ಗಾಬರಿಯಾಗಿ ಅವಳನ್ನು ಕರೆತಂದು ವೈದ್ಯ ರಾಜಶೇಖರನಿಗೆ ತೋರಿಸಿದನು. ರಾಜಶೇಖರನು ಮೋಹಿನಿಯನ್ನು ಪರೀಕ್ಷೆಮಾಡಿ, ಅವಳಿಗೆ ಕುಷ್ಠ ವ್ಯಾಧಿ ತಗಲಿದೆಯೆಂದು ಹೇಳಿ, ಅದಿನ್ನೂ ಪ್ರಾರಂಭದಶೆಯಲ್ಲಷ್ಟೇ ಇದೆ ಎಂತಲೂ ತಿಳಿಸಿದನು. ವೈದ್ಯ ಶಿಖಾಮಣಿ ರಾಜಶೇಖರನ ಮಾತು ಕೇಳಿ ಕುಲಶೇಖರನಿಗೆ ಬಹಳ ವೇದನೆಯಾಯಿತು. ಇದರಿಂದ ತನ್ನ ವಂಶದ ಗೌರವವೇ ಕೆಡುತ್ತದೆಂದೂ, ಮೋಹಿನಿಯನ್ನು ಯಾರೂ ಮದುವೆಯಾಗಲಾರರೆಂದೂ, ಅವಳ ಜನ್ಮವೇ ವ್ಯರ್ಥವೆಂದೂ ತಳಮಳಿಸ ತೊಡಗಿದನು.

ರಾಜಶೇಖರನು ಅವನಿಗೆ ಸಮಾಧಾನ ಹೇಳುತ್ತ, "ಇದು ನಿಮಗೂ ನನಗೂ ಹೊರತು ಮೂರನೆಯವರಿಗೆ ತಿಳಿಯದು; ತಿಳಿಯಬೇಕಾದ ಅಗತ್ಯವೂ ಇಲ್ಲ. ನೀವು ಈ ಸಂಗತಿಯನ್ನು ಮೋಹಿನಿಗೂ ಹೇಳಬೇಡಿ. ಬೇರೆ ಯಾರಿಗೂ ಹೇಳಬೇಡಿ. ಎರಡು ವರ್ಷಗಳ ವರೆಗೆ ನಾನು ಕೊಡುವ ಔಷಧ ತೆಗೆದುಕೊಳ್ಳುತ್ತಿದ್ದರೆ ವ್ಯಾಧಿ ಗುಣವಾಗಿ ಹೋಗುತ್ತದೆ. ಆ ಮೇಲೆ ಅವಳಿಗೆ ಯಾವ ತಡೆಯೂ ಇಲ್ಲದೆ ಮದುವೆ ಮಾಡಬಹುದು" ಎಂದು ಭರವಸೆ ಹೇಳಿದನು.

ಲಕ್ಷ್ಮೀ ವಸುಂಧರೆ

ಅದರಿಂದ ಕುಲಶೇಖರನಿಗೆ ಸಮಾಧಾನವೆನಿಸಿತು. ರಾಜಶೇಖರನು ಮೋಹಿನಿಗೆ ಕೊಡುವ ಔಷಧಗಳನ್ನು ಪ್ರತ್ಯೇಕವಾದ ಪೆಟ್ಟಿಗೆಯಲ್ಲಿಟ್ಟು, ಅದಕ್ಕೆ ಬೀಗ ಹಾಕಿ, ಮೂರನೇ ವ್ಯಕ್ತಿಗೆ ತಿಳಿಯದಂತೆ ಮೋಹಿನಿಗೆ ಚಿಕಿತ್ಸೆಮಾಡಲು ತೊಡಗಿದನು. ಅವನು ಹೇಳಿದಂತೆ ಅವಳ ರೋಗ ಕ್ರಮವಾಗಿ ಗುಣವಾಗುತ್ತ ಬರುತ್ತಿದ್ದಿತು. ಎರಡು ವರ್ಷಗಳ ಗಡು ಸಮೀಪಿಸಿತು. ಅವಳು ರಾಜಶೇಖರನಿಂದ ಚಿಕಿತ್ಸೆಪಡೆಯುವ ಸಂಗತಿ ರಾಜಶೇಖರನಿಗೂ ಕುಲಶೇಖರನಿಗೂ ಮಾತ್ರವೇ ಗೊತ್ತು. ತನ್ನ ರೋಗವೇನೆಂಬುದು ಮೋಹಿನಿಗೂ ತಿಳಿಯದು. ಏನೋ ಮಚ್ಚೆ ಹೋಗುವ ಚಿಕಿತ್ಸೆ ಎಂದಷ್ಟೇ ತಿಳಿದಿದ್ದಳು.

ಸುಂದರಿಯಾದ ಮೋಹಿನಿ ತನ್ನ ಗುರುವಿನ ಹತ್ತಿರ ಇಷ್ಟುಕಾಲದಿಂದ ಯಾವುದಕ್ಕೆ ಚಿಕಿತ್ಸೆ ಪಡೆಯುವಳೆಂದು ರಾಮಶರ್ಮನಿಗೆ ಗೊತ್ತಾಗಲಿಲ್ಲ. ಅದನ್ನು ತಿಳಿಯಬೇಕೆಂಬ ಕುತೂಹಲ ಅವನಲ್ಲಿ ತುಂಬಿಕೊಂಡಿತ್ತು. ಅದಕ್ಕೆ ಕಾರಣವೇನೆಂದರೆ, ಅವನು ಅವಳನ್ನು ಮದುವೆಯಾಗಬೇಕೆಂದು ತುಂಬಾ ಆಸೆಯಲ್ಲಿದ್ದನು. ಆದರೆ ಅವನ ಆಸೆಯನ್ನು ಬಾಯಿಬಿಟ್ಟು ಹೇಳುವಂತಹ ಸ್ಥಾಯಿಯೋ ಅವನದಲ್ಲ. ಮೋಹಿನಿಯ ತಂದೆ ಕುಲಶೇಖರನು ಸಮುದಾಯದಲ್ಲಿ ಬಹಳ ಉನ್ನತ ಸ್ಥಾಯಿಯವನು. ರಾಮಶರ್ಮನು ಎಂದಿಗೂ ಆ ಸ್ಥಾಯಿಗೆ ಬರುವುದು ಸಾಧ್ಯವಿದ್ದಿಲ್ಲ. ಆದರೆ ಏನೋ ಒಂದು ಕಾರಣದಿಂದ ಕುಲಶೇಖರನ ಉನ್ನತಿಗೆ ಏನಾದರೂ ಕುಂದುಬರಿಸಿದರೆ ಮೋಹಿನಿ ತನಗೆ ಎಟಕಬಹುದೆಂದು ರಾಮಶರ್ಮನು ಹೊಂಚುಹಾಕುತ್ತಿದ್ದನು.

ಅಷ್ಟರಲ್ಲಿ ರಾಮಶರ್ಮನ ಕಣ್ಣೆದಿರಿನಲ್ಲಿಯೇ ಮೋಹಿನಿಗೆ ದೊಡ್ಡದೊಂದು ಮನೆತನದ ಸಂಬಂಧವು ಕೂಡಿ ಬಂದಿತು. ನಿಶ್ಚಯತಾಂಬೂಲಕೂಡಾ ನಡೆದು ಹೋಯಿತು.



ಇಂತಹ ಪರಿಸ್ಥಿತಿಯಲ್ಲಿ ಹೊಂಚು ಹಾಕಿಕೊಂಡಿದ್ದ ರಾಮಶರ್ಮನಿಗೆ ಮೋಹಿನಿ ಯಾವ ರೋಗಕ್ಕೆ ಚಿಕಿತ್ಸೆ ಪಡೆದಳೆಂಬ ರಹಸ್ಯ ತಿಳಿದುಹೋಯಿತು. ರಾಜಶೇಖರ ವೈದ್ಯನು ಯಾವ ರೋಗಿಯನ್ನೋ ನೋಡಲು ಅವಸರವಾಗಿ ಹೊರಟು ಹೋಗುವಾಗ, ಮೋಹಿನಿಗೆ ಕೊಡುವ ಔಷಧವಿರುವ ಪೆಟ್ಟಿಗೆಗೆ ಬೀಗ ಹಾಕಲು ಮರೆತುಬಿಟ್ಟನು. ರಾಮಶರ್ಮನು ಆ ಪೆಟ್ಟಿಗೆಯ ಬಾಗಿಲು ತೆರೆದು ಔಷಧಗಳನ್ನು ಪರೀಕ್ಷಿಸಿ ಅದುವರೆಗೆ ತಾನು ಕಲಿತ ವೈದ್ಯಜ್ಞಾನದಿಂದ, ಮೋಹಿನಿ ಕುಷ್ಠ ರೋಗಕ್ಕೆ ಚಿಕಿತ್ಸೆ ಪಡೆದಳೆಂದು ತಿಳಿದುಕೊಂಡನು. ಅವಳು ತನಗೆ ಹೇಗೂ ದಕ್ಕುವವಳಲ್ಲ, ಈಗ ಅವಳಿಗೆ ಬಂದ ಸಂಬಂಧವನ್ನುಕೂಡಾ ಕೆಡಿಸಿ, ಎಂದಿಗೂ ಅವಳಿಗೆ ಮದುವೆಯಾಗದಂತೆ ಮಾಡಬೇಕೆಂಬ ರೊಚ್ಚಿನಿಂದ, ರಾಮಶರ್ಮನು ಮೋಹಿನಿಯ ರೋಗವನ್ನು ಕುರಿತು ಊರೊಳಗೆ ಎಲ್ಲರಿಗೂ ಹೇಳಿದನು. ರಾಮಶರ್ಮನು ವೈದ್ಯನ

ಶಿಷ್ಯನಾದುದರಿಂದ, ಅವಳು ರಹಸ್ಯ ಚಿಕಿತ್ಸೆಪಡೆದುದರಿಂದ, ಊರಿನವರು ರಾಮಶರ್ಮನ ಮಾತನ್ನು ಸುಲಭವಾಗಿ ನಂಬಿದರು. ಕೂಡಿಬಂದು ನಿಶ್ಚಯಿಸಲ್ಪಟ್ಟ ಸಂಬಂಧವೂ ವಿಮುಖವಾಗಿ ಹೋಯಿತು.

ಹೀಗಾದುದರಿಂದ ಕುಲಶೇಖರನಿಗೆ ಮೊದಲು ರಾಜಶೇಖರನ ಮೇಲೆಯೇ ಅನುಮಾನವಾಯಿತು. ಅವನೇ ಮೋಹಿನಿಯ ರೋಗವನ್ನು ಕುರಿತು ರಾಮಶರ್ಮನಿಗೆ ಹೇಳಿರಬೇಕೆಂದುಕೊಂಡು ಕುಲಶೇಖರನು ವೈದ್ಯ ರಾಜಶೇಖರನನ್ನು ಆಕ್ಷೇಪಿಸಿ ಕಠಿಣವಾಗಿ ಮಾತಾಡಿದನು.

"ನಿಮ್ಮ ಮಗಳ ರೋಗವನ್ನು ಕುರಿತು ನಾನು ಯಾರೊಡನೆಯೂ ಹೇಳಲಿಲ್ಲ. ಆ ರಹಸ್ಯವು ಮೊದಲು ತಿಳಿದು ಹೇಳಿದವನು ನನ್ನ ಶಿಷ್ಯ ರಾಮಶರ್ಮನೇ ಆದುದರಿಂದ, ನಡೆದು ಹೋದುದಕ್ಕೆ ಪ್ರತೀಕಾರಕೂಡಾ ನಾನೇ ಮಾಡಬೇಕು. ನೀವು ನ್ಯಾಯಾಲಯಕ್ಕೆ ಹೋಗಿ, ನನ್ನ ಶಿಷ್ಯ ರಾಮಶರ್ಮನು ನಿಮ್ಮ ಮಗಳ ಮೇಲೆ ಅಸತ್ಯ ಪ್ರಚಾರ ಮಾಡಿ, ನಿಮ್ಮ ಗೌರವಕ್ಕೆ ಕುಂದುತಂದನೆಂದೂ. ಅವಳ ಮದುವೆಯನ್ನು ಹಾಳು ಮಾಡಿದನೆಂದೂ ಫಿರ್ಯಾದಿ ಮಾಡಿರಿ. ನಾನು ನಿಮ್ಮ ಪರವಾಗಿ ಸಾಕ್ಷಿ ಹೇಳುತ್ತೇನೆ" ಎಂದು ಆಲೋಚನೆ ಹೇಳಿದನು ರಾಜಶೇಖರ.

ಕುಲಶೇಖರನು ರಾಜಶೇಖರನು ಹೇಳಿದ ವಿಧದಲ್ಲಿ ರಾಮಶರ್ಮನ ಮೇಲೆ ಫಿರ್ಯಾದಿ ಮಾಡಿದನು. ನ್ಯಾಯಾಧೀಶನು ರಾಜಶೇಖರನನ್ನು ಕರೆಯಿಸಿ ವಿಚಾರಣೆ ನಡೆಸಿದನು. ಆಗ ರಾಜಶೇಖರನು ನ್ಯಾಯಾಧೀಶನ ಮುಂದೆ, "ಮೋಹಿನಿಗೆ ಈಗ ಕುಷ್ಠ ವ್ಯಾಧಿ ಲವಲೇಶವೂ ಇಲ್ಲ. ರಾಮಶರ್ಮನು ಅವಳ ಸ್ಥಿತಿಯನ್ನು ತಿಳಿದುಕೊಳ್ಳದೆಯೇ ಅವಳಿಗೆ ಆ ವ್ಯಾಧಿ ಇರುವುದೆಂದು ಪ್ರಪಂಚವನ್ನು ನಂಬಿಸಿದನು. ಅವಳಿಗೆ ನಿಶ್ಚಯಿಸಲ್ಪಟ್ಟ ವರನುಕೂಡಾ ಅವಳನ್ನು ಬೇಡವೆನ್ನುವ ಆಗತ್ಯವೂ ಇಲ್ಲ. ಮದುಮಗನ ಸ್ಥಾನದಲ್ಲಿ ನಾನೇ ಇದ್ದಿರುವ ಪಕ್ಷದಲ್ಲಿ ಅವಳನ್ನು ತಪ್ಪದೆ ಮದುವೆ ಮಾಡಿಕೊಳ್ಳುತ್ತಿದ್ದೆ" ಎಂದು ಹೇಳಿದನು.

ಇದರಿಂದ ರಾಮಶರ್ಮನ ಯೋಗ್ಯತೆ ಎಲ್ಲರಿಗೂ ಗೊತ್ತಾಯಿತು, ಅವನು ಆ ಊರಿನಲ್ಲಿ ಯಾರಿಗೂ ಮೋರೆ ತೋರಿಸಲಾಗದೆ ಊರು ಬಿಟ್ಟೇ ಹೋಗಿಬಿಟ್ಟನು. ತಪ್ಪಿಹೋದ ಸಂಬಂಧವನ್ನು ತಿರುಗಿ ಕೂಡಿಸುವ ಪ್ರಯತ್ನಮಾಡುವುದಕ್ಕಿಂತ, ಮೋಹಿನಿಯನ್ನು ಭಯಂಕರವಾದ ರೋಗದಿಂದ ಕಾಪಾಡಿ, ಅವಳನ್ನು ಮದುವೆಯಾಗಲಿಕ್ಕೆಕೂಡಾ ತಯಾರಾಗಿದ್ದ ರಾಜಶೇಖರನಿಗೇ ಮದುವೆಮಾಡುವುದು ಒಳ್ಳೆಯದೆಂದು ಕುಲಶೇಖರನಿಗೆ ತೋರಿತು. ಹಾಗೆಯೇ ಮದುವೆಯೂ ನಡೆಯಿತು.





# ದೇವೀಭಾಗವತ

**ಸು**ದರ್ಶನನನ್ನು ಮದುವೆಯಾಗುವ ಆಲೋಚನೆಯನ್ನು ಬಿಟ್ಟುಬಿಡುವಂತೆ ತಂದೆಯೂ ತಾಯಿಯೂ ತುಂಬಾ ಒತ್ತಾಯಪಡಿಸಿದರು. ಕಡೆಗೆ ಶಶಿಕಳೆ ತನ್ನ ತಾಯಿಯೊಂದಿಗೆ ಹೀಗೆಂದಳು :

"ಅಮ್ಮಾ, ಸುದರ್ಶನನು ಕಾಡಿನಲ್ಲಿದ್ದರೇನು ? ನಾಡಿನಲ್ಲಿದ್ದರೇನು ? ನಗರದಲ್ಲಿದ್ದರೇನು ? ಅವನ ಹತ್ತಿರ ಚಿಕ್ಕಾಸುಕೂಡಾ ಇಲ್ಲದಿದ್ದರೇನು ? ಅಥವಾ ನವನಿಧಿಗಳೇ ಅವನ ಹತ್ತಿರ ಇದ್ದರೇನು ? ನನ್ನ ಮನಸ್ಸು ಅವನನ್ನು ಬಿಟ್ಟು ಕೂದಲಿನಷ್ಟೂ ಕದಲುವಂತಹುದಲ್ಲ. ಬ್ರಹ್ಮ ಬರೆದುದನ್ನು ಬದಲಾಯಿಸಲು ಬ್ರಹ್ಮನಿಗೂ ಸಾಧ್ಯವಾಗುವುದಿಲ್ಲ, ಗಂಡನಿಗೆ ಸಂತೋಷದಿಂದ ಸೇವೆ ಮಾಡುವವಳಿಗೆ ಸ್ವರ್ಗ ಮೋಕ್ಷ ಸಮಸ್ತವೂ ಸಿಗುತ್ತವೆ ಅಮ್ಮಾ. ನನ್ನ ಭವಿಷ್ಯತ್ತನ್ನು ಮಹಾದೇವಿಯೇ ನಿಶ್ಚಯಿಸಿ ಬಿಟ್ಟಿದ್ದಾಳೆ. ನನಗೆ ಇಷ್ಟವಾದವನು ಸುದರ್ಶನನೇ !"

ಹೀಗೆ ಶಶಿಕಳೆಯ ದೃಢನಿರ್ಧಾರದ ಮಾತುಗಳನ್ನು ಅವಳ ತಾಯಿ ತನ್ನ ಗಂಡನೊಂದಿಗೆ ಹೇಳಿದಳು. ಆತನೂ ದೇವರಮೇಲೆ ಭಾರ ಹಾಕಿದನು. ಸ್ವಯಂವರಕ್ಕೆ ನಿರ್ಣಯಿಸಿದ ದಿನವು ಸಮೀಪಿಸುತ್ತಿದ್ದಿತು. ಯಾರಾರೋ ಬರುತ್ತಿದ್ದರಾಗಲೀ ಸುದರ್ಶನನು ಬರಲಿಲ್ಲ. ಶಶಿಕಳೆ ತನ್ನ ಹಿತ ಚಿಂತಕನಾದ ಒಬ್ಬ ಬ್ರಾಹ್ಮಣನನ್ನು ರಹಸ್ಯವಾಗಿ ಕರೆದು, ಅವನೊಂದಿಗೆ. "ಅಯ್ಯಾ, ನೀವು ನನ್ನ ತಂದೆಗೆ ತಿಳಿಯದ ಹಾಗೆ ಭರದ್ವಾಜಾಶ್ರಕ್ಕೆ ಹೋಗಿ ಸುದರ್ಶನನನ್ನು ನೋಡಿ, ನಾನು ಹೇಳಿದೆನೆಂದು ಹೇಳಿರಿ, ಅಂಬಾ ದೇವಿ ನನಗೆ ಸುದರ್ಶನನನ್ನೇ ಮಾಡುವೆಯಾಗಲು ಹೇಳಿದ್ದಾಳೆ, ನನ್ನ ಸ್ವಯಂವರಕ್ಕಾಗಿ ರಾಜರೆಲ್ಲಾ ಬಂದು ಕೂಡುತ್ತಿದ್ದಾರೆ. ನನ್ನ ಮನಸ್ಸು ನಿನ್ನ ಮೇಲೆಯೇ ನಿಂತಿದೆ, ನಿನ್ನನ್ನು ಹೊರತು ಬೇರೊಬ್ಬನನ್ನು ವರಿಸಲಾರೆನು. ನಿನ್ನನ್ನು ಮದುವೆಯಾಗಲು ಸಾಧ್ಯವಾಗದೇ ಹೋದ ಪಕ್ಷದಲ್ಲಿ ನಾನು ಅಗ್ನಿಗೆ ಹಾರುತ್ತೇನೆ. ನೀನು ತಪ್ಪಿದರೆ ನಾನು ಜೀವದೊಂದಿಗೆ ಇರುವೆನೆಂಬುದು ಸುಳ್ಳು ! ಅಂಬಾದೇವಿಯ ದಯದಿಂದ ನಮಗೆ ಸಮಸ್ತ ಶುಭಗಳೂ ಕೈ ಗೂಡುತ್ತವೆ. ಅವಳು ಹೇಳಿದ ಮಾತು

೯. ಶಶಿಕಳಾ ಸ್ವಯಂವರ



ಎಂದಿಗೂ ಸುಳ್ಳಾಗದು. ಆ ಜಗನ್ಮಾತೆಯನ್ನು ನಂಬಿ ನೀನು ತಪ್ಪದೆ ಬಂದು ನನ್ನ ಕೈಯನ್ನು ಹಿಡಿಯಲೇಬೇಕು. ನನ್ನ ಸ್ವಯಂವರವು ನಿನ್ನೊಂದಿಗೇ ನಡೆಯುವುದೆಂದು ನಂಬಿದ್ದೇನೆ." ಎಂದಳು.

ಶಶಿಕಳೆಯ ಸಂದೇಶವನ್ನೂ, ಅದಕ್ಕೆ ತಕ್ಕ ದಕ್ಷಿಣೆಯನ್ನೂ ತೆಗೆದುಕೊಂಡು ಆ ಬ್ರಾಹ್ಮಣನು ಭರದ್ವಾಜಾಶ್ರಮಕ್ಕೆ ಹೋದನು. ಅಲ್ಲಿ ಸುದರ್ಶನನನ್ನು ನೋಡಿ ಶಶಿಕಳೆಯ ಸಂದೇಶವನ್ನು ಅವನಿಗೆ ತಿಳಿಸಿದನು. ಅದನ್ನು ಕೇಳಿದ ಕೂಡಲೇ ಸುದರ್ಶನನು ಅತ್ಯುತ್ಸಾಹದಿಂದ ಶಶಿಕಳೆಯ ಸ್ವಯಂವರಕ್ಕೆ ಹೊರಟಬಿಟ್ಟನು.

ಹೀಗೆ ಅವನು ಹೊರಟು ನಿಂತುದನ್ನು ನೋಡಿ, ಅವನ ತಾಯಿ ಮನೋರಮೆಯ ಎದೆಗೆ ಕಲ್ಲು ಒತ್ತಿಕೊಂಡ ಹಾಗಾಯಿತು. ಅವಳು ತಡೆಯಲಾಗದ ದುಃಖದಿಂದ ಮಗನೊಂದಿಗೆ ಹೀಗೆ ಹೇಳಿದಳು: "ಅಪ್ಪಾ, ನನ್ನ ಕಂದಾ! ಅಷ್ಟು ಮಂದಿ ದೊಡ್ಡ ದೊಡ್ಡ ರಾಜರಿರುವ ಸ್ಥಳಕ್ಕೆ, ಸಹಾಯಕರಾರೂ ಇಲ್ಲದೆ, ನೀನೊಬ್ಬನೇ ಹೋಗುವೆಯಾ? ನಿನ್ನ ಪಾಲಿಗೆ ಯಮನಲ್ಲವೇ ಆ ಯುಧಾಜಿತ್ತು? ಅವನು ಅಲ್ಲಿಗೆ ಬಂದೇ ಬರುತ್ತಾನೆ. ನೀನು ಅವನ ಕಣ್ಣಿಗೆ ಬಿದ್ದರೆ ಏನು ಗತಿಯಪ್ಪಾ? ನನಗೆ ಪುತ್ರಶೋಕವನ್ನು ತರಬೇಡವೋ ಕಂದಾ! ನನ್ನಮಾತು ಸ್ವಲ್ಪ ಕೇಳಪ್ಪ. ಈ ಹಟವನ್ನು ಬಿಡಪ್ಪಾ!"

ಆಗ ತನ್ನ ತಾಯಿಗೆ ಸುದರ್ಶನನು, "ಅಮ್ಮಾ! ಮಹಾದೇವಿಯ ಆಜ್ಞೆಯನ್ನು ಪಾಲಿಸಲು ಸಿದ್ಧನಾಗಿ ನಿಂತವನಿಗೆ ಕೆಡುಕು ಹೇಗಾಗುತ್ತದೆ? ಇನ್ನೊಬ್ಬನ ಬಲವನ್ನು ಎಣಿಸಿಕೊಂಡು ನಾನೇಕೆ ಹೆದರಬೇಕು? ನೀನು ಕ್ಷತ್ರಿಯ ವನಿತೆಯಾಗಿದ್ದು ಹೀಗೆ ಕಣ್ಣೀರು ತುಂಬಿಕೊಳ್ಳಬಹುದೆ? ಆಗುವಂತಹುದು ಹೇಗಾದರೂ ಆಗಿಯೇ ಆಗುತ್ತದೆ. ಸುಖ ದುಃಖಗಳು ಕಾವಡಿ ಬಿಂದಿಗೆಗಳೆಂದು ತಿಳಿಯಮ್ಮಾ. . ದೇವಿಯನ್ನು ನಂಬಿ ಧೈರ್ಯವಾಗಿರು" ಎಂದು ತಾಯಿಗೆ ಧೈರ್ಯ ಹೇಳಿ, ನಿಷಾದ ರಾಜನು ತನಗೆ ಕೊಟ್ಟ ರಥವನ್ನು ಏರಿಕೊಂಡು ಹೊರಡಲು ಸಿದ್ಧನಾಗಿ ತಾಯಿಯನ್ನು ನೋಡಿದನು.

ಆಗ ಮನೋರಮೆ ಅವನನ್ನು ಹರಸುತ್ತ, "ಕಂದಾ, ನಿನ್ನನ್ನು ಬಿಟ್ಟು ಒಂದುಕ್ಷಣ ಕಳೆಯುವುದೂ ನನಗೆ ಕಷ್ಟವಾಗಿದೆ. ನಿನ್ನನ್ನು ನೋಡಿಕೊಂಡೇ ಇಷ್ಟು ಕಾಲ ಬದುಕಿರಲು ಸಾಧ್ಯವಾಯಿತು. ಈಗ ನಿನ್ನನ್ನು ಅಗಲಿ ಬದುಕಿರಲು ನನಗೆ ಸಾಧ್ಯವಾಗದು. ನಾನೂ ಬರುವೆನು. ನನ್ನನ್ನು ಸಹಾ ನಿನ್ನ ರಥದ ಮೇಲೆ ಏರಿಸಿಕೊಂಡು ಹೋಗಪ್ಪ" ಎಂದಳು.

ಹಾಗೇ ಆಗಲೆಂದು ಸುದರ್ಶನನು ತನ್ನ ತಾಯಿಯನ್ನೂ, ಸೈರಂಧ್ರಿಯನ್ನೂ ರಥದ ಮೇಲೆ ಏರಿಸಿಕೊಂಡು ಹೋಗಿ ಕಾಶೀ ನಗರವನ್ನು ತಲಪಿದನು. ಸ್ವಯಂವರಕ್ಕಾಗಿ ಬಂದ ರಾಜರಿಗೆಲ್ಲಾ ಗೌರವ ಮರ್ಯಾದೆಗಳನ್ನು ತೋರಿಸಿದ ಹಾಗೆಯೇ,

ಸುಬಾಹುರಾಜನು ಸುದರ್ಶನನಿಗೂ ಇದಿರಾಗಿಬಂದು ಸ್ವಾಗತ ಹೇಳಿ ಬಿಡದಿಯನ್ನು ತೋರಿಸಿ, ಪರಿಚಾರಕ ರನ್ನೂ ನಿಯಮಿಸಿದನು.

ಶಶಿಕಳೆಯ ಸ್ವಯಂವರಕ್ಕೆ ತನ್ನ ಮೊಮ್ಮಗ ನೊಂದಿಗೆ ಬಂದ ಯುಧಾಜಿತ್ತು ಮತ್ತು ಇತರ ರಾಜರುಕೂಡಾ ಸುದರ್ಶನನನ್ನು ನೋಡಿ, "ಎಲೆಲಾ! ಈ ತಿರುಕ ತಾನೂ ಒಬ್ಬ ತಕ್ಕವನ ಹಾಗೆ ಈ ಸ್ವಯಂವರಕ್ಕೆ ಬಂದಿದ್ದಾನಲ್ಲ! ಮಹಾ ಮಹಾ ರಾಜ ಕುಮಾರರನ್ನು ಬಿಟ್ಟು ಆ ರಾಜಕುಮಾರಿ ತನ್ನನ್ನೇ ವರಿಸುತ್ತಾಳೆಂದುಕೊಂಡಿದ್ದಾನೇನೋ! ಏನೋ ಹೇಳುತ್ತಾರಲ್ಲ, ಆಸೆಬಿಟ್ಟ ಬಂಜೆಯೂ ಬಸಿರಾದ ಳಂತೆ!" ಎಂದು ತಮ್ಮೊಳಗೆ ತಾವು ಮಾತಾಡಿ ಕೊಂಡರು.

ಅವರ ಮಾತುಗಳನ್ನು ಕೇಳಿ ಯುಧಾಜಿತ್ತು, "ನೀವೆಲ್ಲಾ ನೋಡುತ್ತಾ ಇರಿ. ಈ ಸುದರ್ಶನನಿಗೆ ನಾನೇ ಯಮ!" ಎಂದನು.

ಅದನ್ನು ಕೇಳಿ ಕೇರಳದ ರಾಜನು, "ಇದರಲ್ಲಿ ಯಾರೇನು ಮಾಡಲು ಸಾಧ್ಯವಿದೆ? ಇದು ಇಚ್ಛಾ ಸ್ವಯಂವರ. ವಧು ತನಗೆ ಇಷ್ಟಬಂದವರನ್ನು ವರನಾಗಿ ಸ್ವೀಕರಿಸುತ್ತಾಳೆ. ಅದಕ್ಕೆ ಉಳಿದವರೆಲ್ಲಾ ಒಪ್ಪಿಕೊಂಡು ತೀರಲೇಬೇಕು. ಅದನ್ನು ವಿರೋಧಿಸಿ ಗಲಭೆ ಎಬ್ಬಿಸಿದರೆ ಯಾವ ರಾಜರಿಗೂ ಮರ್ಯಾದೆ ಗೊತ್ತಿಲ್ಲವೆಂಬ ಕೆಟ್ಟಮಾತು ಬರುತ್ತದೆ. ಅದು ಹೋಗಲಿ. ಯುಧಾಜಿತ್ತೂ, ನೀನು ಈ ಸುದರ್ಶನನ ರಾಜ್ಯವನ್ನು ಅಕ್ರಮವಾಗಿ ವಶಪಡಿಸಿಕೊಂಡು ನಿನ್ನ ಮೊಮ್ಮಗನಿಗೆ ಪಟ್ಟಗಟ್ಟಿದೆ. ಒಂದು ವೇಳೆ ಸ್ವಯಂವರದಲ್ಲಿ ನಿನ್ನ ಮೊಮ್ಮಗನ ಕೊರಳಿಗೆ ವರ ಮಾಲೆ ಬಿತ್ತು ಅಂದುಕೋ. ಆಗ ಸುದರ್ಶನನು ನಿನ್ನನ್ನೇನಾದರೂ ಮಾಡಲೂಬಹುದು! ಎಚ್ಚ ರಾಗಿರು. ಏನಾದರೂ ಕಡೆಗೆ ಧರ್ಮವೇ ಜಯಿಸು ತ್ತದೆ. ಸತ್ಯವು ವೃದ್ಧಿಗೊಳ್ಳುತ್ತದೆ. ಸುಮ್ಮನೆ



ಹಟಗಟ್ಟಿ ದುಷ್ಟತನವನ್ನು ತೋರಿಸ ಬೇಡಯ್ಯ. ರಾಜಕುಮಾರಿ ಇಲ್ಲಿ ಸೇರಿದವರನ್ನೆಲ್ಲಾ ವರಿಸಲು ಸಾಧ್ಯವಿಲ್ಲ ವಷ್ಟೆ? ಒಬ್ಬನನ್ನು ಮಾತ್ರವರಿಸುತ್ತಾಳೆ. ಉಳಿದವರು ಅಸೂಯೆಪಡುವುದು ನ್ಯಾಯವಲ್ಲ" ಎಂದನು.

ಆ ಮಾತಿಗೆ ಯುಧಾಜಿತ್ತು "ನೀನು ಹೇಳಿದಂತೆ ಇದು ಇಚ್ಛಾ ಸ್ವಯಂವರವೇ. ಇಲ್ಲಿ ಕೂಡಿದವರಲ್ಲಿ ಹೆಚ್ಚಿನ ಯೋಗ್ಯತೆಯುಳ್ಳವನನ್ನು ರಾಜಕುಮಾರಿ ವರಿಸಿದರೆ ನಮಗೂ ಸಂತೋಷವೇ. ಆದರೆ ಇಷ್ಟು ಮಂದಿ ತೇಜೋವಂತರೂ, ಉತ್ತಮೋತ್ತಮರೂ ಆದ ರಾಜಕುಮಾರರಿರುವಾಗ ಅವಳು ಊರೂ ಹೆಸರು ಇಲ್ಲದ ಅನಾಮಧೇಯನನ್ನು ವರಿಸಿಬಿಟ್ಟರೆ ಉಳಿದವರೆಲ್ಲಾ ನೋಡುತ್ತಾ ಸುಮ್ಮನಿರಬೇಕೇನು? ಸಿಂಹವು ಭುಜಿಸಬೇಕಾದುದನ್ನು ನರಿ ತಿನ್ನಬಹುದೆ? ನೀನು ಹೇಳುವ ನೀತಿ ಇಂತಹುದೇನು? ಬ್ರಾಹ್ಮಣ ರಿಗೆ ವೇದಗಳೇ ಬಲ. ಕ್ಷತ್ರಿಯರಿಗೆ ಆಯುಧವೇ



ಬಲ. ಕ್ಷತ್ರಿಯರ ವಿವಾಹಗಳಿಗೆ ಕೂಡಾ ಆಯುಧ ಬಲವೇ ಶುಲ್ಕ. ಈ ವಧು ಬಲವಂತನ ಸೊತ್ತು, ಏನು ಇಚ್ಛಾ ಸ್ವಯಂವರವಾದರೂ !" ಎಂದನು.

"ಆ ಬಲವು ಸುದರ್ಶನನದೇ ಆದರೆ ಅವನೇ ತೆಗೆದುಕೊಳ್ಳುತ್ತಾನಲ್ಲ !" ಎಂದರು ಕೆಲವರು ಜಗಳದ ಬೆಂಕಿಗೇ ತುಪ್ಪ ಹಾಕಲು ಸಿದ್ಧರಿದ್ದವರ ಹಾಗೆ. ಆ ಮಾತು ಕೇಳಿ ಕೆಲವರು ಗಟ್ಟಿಯಾಗಿ ನಕ್ಕರು,

ಸ್ವಯಂವರಕ್ಕೆ ಬಂದ ರಾಜರೊಳಗೆ ವಾಗ್ವಾದವು ಬೆಳೆಯಿತು. ಸುಬಾಹುವನ್ನು ಕೂಡಾ ತಮ್ಮ ವಿವಾದಕ್ಕೆ ಕರೆಯಿಸಿದರು. ಅವರ ವಾದ ವಿವಾದಗಳನ್ನು ಕೇಳಿ ಸುಬಾಹು, "ಮಹಾರಾಜ ಬಾಂಧವರೇ. ನಿಜ ಹೇಳುತ್ತೇನೆ. ನನ್ನ ಮಗಳು ಸುದರ್ಶನನನ್ನೇ ಮನಃ ಪೂರ್ವಕವಾಗಿ ವರಿಸಲು ನಿಶ್ಚಯಿಸಿದ್ದಾಳೆ. ಅವನು ಅರ್ಹನಲ್ಲವೆಂದು ಎಷ್ಟು ಹೇಳಿದರೂ ಕೇಳುವುದಿಲ್ಲ. ಅವನು ಕೂಡಾ ಸ್ವಯಂವರಕ್ಕೆ ಬಂದಿದ್ದಾನೆ. ಹೇಗೆ ನಡೆಯಬೇಕೆಂದಿರುವುದೋ ಹಾಗೆಯೇ ನಡೆಯುತ್ತದೆ. ವಾಗ್ವಾದವನ್ನು ಬೆಳೆಸ ಬೇಡಿರಿ" ಎಂದು ಕೈ ಮುಗಿದು ಕೇಳಿಕೊಂಡನು.

ಸುಬಾಹು ಸುದರ್ಶನನನ್ನು ಸ್ವಯಂವರದಿಂದ ಬಹಿಷ್ಕರಿಸುವುದಿಲ್ಲವೆಂದು ಎಲ್ಲರಿಗೂ ತಿಳಿಯಿತು. ಕಡೆಗೆ ಅವರು ಸುದರ್ಶನನನ್ನೇ ಕರೆಯಿಸಿ ಹೀಗೆಂದರು : "ನೋಡಪ್ಪ, ನೀನು ಒಬ್ಬಂಟಿಗನಾಗಿ ಬಂದವನು. ಭಾರಿಭಾರಿ ಸೇನೆಗಳನ್ನು ಕರೆದುಕೊಂಡು ಬಂದಿರುವ ರಾಜಕುಮಾರರೂ. ಅನೇಕ ಮಂದಿ ರಾಜರೂ ಇಲ್ಲಿದ್ದಾರೆ. ಯುದ್ಧಮಾಡಿಯಾದರೂ ಶಶಿಕಳೆಯನ್ನು ಮದುವೆಯಾಗುವ ನಿರ್ಧಾರದಲ್ಲಿ ಬಂದಿದ್ದಾರೆ. ನೀನೊಬ್ಬನು ಏನು ಮಾಡಲು ಸಾಧ್ಯ ? ನಿನ್ನ ತಮ್ಮನಾದ ಶತ್ರುಜಿತ್ತು ಅಪಾರಕಾರ್ಯ ಸಾಹಸ ಉಳ್ಳವನು. ಮಹಾ ಯೋಗ್ಯನು. ಸುಂದರನಾಗಿಯೂ ಇದ್ದಾನೆ. ಅವನಿಗೆ ಸಹಾಯವಾಗಿ ಅವನ ತಾತ, ಪ್ರತ್ಯೇಕವಾಗಿ ನಿನ್ನನ್ನು ಕೊಲ್ಲಲಿಕ್ಕೇ ಬಂದಿದ್ದಾನೆ. ಇಂತಹ ಸ್ಥಳಕ್ಕೆ ನೀನು ಬಂದುದು ಎಷ್ಟು ದೊಡ್ಡ ತಪ್ಪೆಂದು ಗೊತ್ತಾಯಿತೆ ? ನಿನ್ನನ್ನು ಯಾರು ಕರೆದರೋ ಪಾಪ ? ಯಾಕೆ ಬಂದೆಯಪ್ಪಾ ? ಇರುವ ಮಾತು ಹೇಳಿದ್ದೇವೆ. ಆಮೇಲೆ ನಿನ್ನ ಇಷ್ಟ !"

ಅವರ ಮಾತಿಗೆ ಸುದರ್ಶನನು ಹೀಗೆಂದನು : "ಮಹಾರಾಜರೇ. ನಿಮ್ಮ ದಯೆಗೂ ಹಿತಚಿಂತನೆಯ ಮಾತುಗಳಿಗೂ ತುಂಬಾ ಕೃತಜ್ಞನು. ನೀವು ಹೇಳಿದ್ದೆಲ್ಲವೂ ನಾನೂ ಬಲ್ಲೆನು. ಇಷ್ಟರವರೆಗೆ ಬಂದ ಮೇಲೆ ನಿಮ್ಮ ಮಾತು ಕೇಳಿ ಭಯಪಟ್ಟು ಹೋಗುವುದರಿಂದ ಯಾವ ಪ್ರಯೋಜನವೂ ಇಲ್ಲ. ನನ್ನ ಭಾರವನ್ನೆಲ್ಲಾ ಹೊತ್ತು ನನ್ನನ್ನು ಇಲ್ಲಿಗೆ ಬರುವಂತೆ ಮಾಡಿದವಳು ಮಹಾ ಮಾತೆ ! ಅವಳು ನನಗೆ ಏನಾದರೂ ಸಹಾಯ ಮಾಡದೆ ಶತ್ರುಗಳಿಗೆ ಒಪ್ಪಿಸಿ ಬಿಡುವಳೇ? ನಿಜಕ್ಕೂ ನನಗೆ ಶತ್ರುಗಳೂ ಇಲ್ಲ, ಮಿತ್ರರೂ ಇಲ್ಲ. ಎಲ್ಲಿ ನೋಡಿದರೂ ಆ ಮಹಾಮಹೇಶ್ವರಿಯೇ ಕಾಣುತ್ತಿದ್ದಾಳೆ. ಅವಳ ಆದೇಶದ ಮೇಲೆಯೇ ನಾನು

ಈ ಸ್ವಯಂವರಕ್ಕೆ ಬಂದೆ. ನನ್ನ ಮೇಲೆ ಯಾರಾದರೂ ಕೋಪದಿಂದ ಕನಲುವರಾದರೆ ಅವರು ದೇವಿಗೆ ಶತ್ರುಗಳಾಗುವರು. ನನಗೆ ಸೇನೆಗಳು ಇಲ್ಲವೆನ್ನುವಿರಾ ? ಅಗತ್ಯವಿಲ್ಲ. ಯಾವ ಮಹಾದೇವಿ ಎಂತಹ ದುರ್ಬಲರಿಗಾದರೂ ಬಲವನ್ನೂ, ಸಂಪತ್ತನ್ನೂ ಕೊಡುವಳೋ ಆ ದೇವಿಯೇ ನನಗೆ ಬಲ ! ಇತರ ಬಲಗಳ ವಿಷಯದಲ್ಲಿ ನನಗೆ ನಂಬುಗೆ ಇಲ್ಲ. ನನ್ನ ದೃಷ್ಟಿಗೆ ಶಕ್ತರೂ ಅಶಕ್ತರೂ ಎಂಬುದೇನಿಲ್ಲ. ಮಹಾಶಕ್ತಿಯ ಅನುಗ್ರಹಕ್ಕೆ ಪಾತ್ರರಾದವರೆಲ್ಲಾ ಶಕ್ತಿವಂತರೇ. ಅವಳ ಅನುಗ್ರಹಕ್ಕೆ ಪಾತ್ರರಾಗದ ಬ್ರಹ್ಮಾದಿಗಳಾದರೂ ಶಕ್ತಿಹೀನರೇ ! ನನಗೆ ಜಯವಾದರೂ ಅಪಜಯವಾದರೂ ಅದು ಜಗದಂಬೆಯದೇ ಹೊರತು ನನ್ನದಲ್ಲ. ಆದುದರಿಂದ ನೀವಾರೂ ನನ್ನನ್ನು ಕುರಿತು ಚಿಂತಿಸಬೇಡಿರಿ"



ಈ ಮಾತುಗಳನ್ನು ಕೇಳಿ ಕೆಲಮಂದಿ ರಾಜರು ಸಂತೋಷ ಪಟ್ಟು. "ಅಪ್ಪಾ, ನಿನ್ನ ಮಾತುಗಳು ಮೂರುಕಾಲಕ್ಕೂ ನಿಜ. ನೀನೊಬ್ಬ ಪುಣ್ಯಾತ್ಮ. ಆದರೆ ನಿನ್ನ ಮೇಲೆ ಯುಧಾಜಿತ್ತುವಿನದು ಹುಟ್ಟು ಹಗೆ ಯೆಂಬುದನ್ನು ಮಾತ್ರ ಮರೆಯಬೇಡ !" ಎಂದು ಎಚ್ಚರಿಸಿದರು.

ಆ ಮಾತು ಹೇಳಿದವರನ್ನು ನೋಡಿ ಸುದರ್ಶನನು, "ಮಹಾರಾಜರೆ, ನನ್ನ ಮೇಲೆ ನಿಮಗೆಲ್ಲಾ ಇರುವ ತುಂಬು ಅನುಗ್ರಹದ ಒತ್ತಡದಲ್ಲಿ ನೀವು ನನಗೆ ಈ ಮಾತುಗಳನ್ನು ಹೇಳುವಿರಿ. ಈ ಪ್ರಪಂಚದಲ್ಲಿ ಮರಣವು ಯಾರ ಅಧಿನದಲ್ಲಿಯೂ ಇಲ್ಲ. ಪ್ರಾಣವಿರುವವರೆಲ್ಲ ಕರ್ಮಕ್ಕೆ ಕಟ್ಟುಬಿದ್ದವರೇ. ಯಾರಿಗೂ ಸ್ವೇಚ್ಛೆಯೆಂಬುದಿಲ್ಲ. ಕಾಲವೇ ಕರ್ಮವನ್ನೂ ಸ್ವಭಾವವನ್ನೂ ಮೊದಲೇ ನಿರ್ಣಯಿಸಿಟ್ಟಿರುತ್ತದೆ. ಕಾಲವು ಬಾರದಿದ್ದರೆ ದೇವರಿಂದಲೂ ಕೊಲ್ಲಲು ಸಾಧ್ಯವಿಲ್ಲ. ಯಮಧರ್ಮರಾಜನಾದರೂ ನಿಮಿತ್ತ ಮಾತ್ರನೇ. ನನ್ನ ತಂದೆಯನ್ನು ಕೊಂದ ಸಿಂಹವೂ ನನ್ನ ತಾತನನ್ನು ಕೊಂದ ಯುಧಾಜಿತ್ತೂ ಸಹಾ ನಿಮಿತ್ತ ಮಾತ್ರರೇ. ಒಂದು ವೇಳೆ ಮರಣವೇ ಬರುವುದಾಗಿದ್ದರೆ ತಪ್ಪಿಸಲು ಯಾರಿಂದ ಸಾಧ್ಯ ? ಆದುದರಿಂದ ನನ್ನ ದೃಷ್ಟಿಗೆ ಒಬ್ಬರನ್ನು ಒಬ್ಬರು ರಕ್ಷಿಸುವರೆಂದು ನಂಬಲು ಸಾಧ್ಯವಿಲ್ಲ. ದೈವಬಲವಿದ್ದರೆ ಸಾವಿರ ವರ್ಷವೂ ಬದುಕಬಹುದು. ನಾನು ದೈವವನ್ನು ನಂಬಿಕೊಂಡೇ ಬಂದಿದ್ದೇನೆ. ನನಗೆ ಸಹಾಯಕವಾಗಿರುವ ಸೇನೆಕೂಡಾ ಆ ದೈವವೇ. ನನಗೆ ಶತ್ರುಗಳಿದ್ದರೆ ಅದುಕೂಡಾ ದೈವವೇ. ನನ್ನನ್ನು ಕುರಿತು ಯಾರೂ ಚಿಂತಿಸಬೇಕಾಗಿಲ್ಲ" ಎಂದನು. ಅವನ ಮಾತುಗಳನ್ನು ಕೇಳಿ ಎಲ್ಲರೂ ಮೆಚ್ಚಿಗೆಯಿಂದ ಸಂತೋಷ ವ್ಯಕ್ತಪಡಿಸಿದರು. ಸುದರ್ಶನನು ತನ್ನ ಬಿಡದಿಗೆ ಹೊರಟು ಹೋದನು.

ಸ್ವಯಂವರದ ದಿನವು ಉದಯವಾಯಿತು. ಸುಬಾಹು ಬಂದಿರುವ ರಾಜರನ್ನೆಲ್ಲಾ ಸ್ವಯಂವರ ಮಂಟಪದಲ್ಲಿ ಸಮಾವೇಶ ಗೊಳಿಸಿದನು. ಎಲ್ಲರೂ



ಶಶಿಕಳೆಯ ಬರುವಿಕೆಯನ್ನು ಎದುರು ನೋಡಿ ಕೊಂಡಿದ್ದರು. ಅವಳು ಬಂದು ಯಾರ ಕೊರಳಿಗೆ ಮಾಲೆಹಾಕುವಳೋ ಎಂದು ಎಲ್ಲರೂ ಆಶ್ಚರ್ಯ ಪಡುತ್ತಿದ್ದರು. ಕೆಲವರು ತಮ್ಮ ತಮ್ಮೊಳಗೆ ಶಶಿಕಳೆ ಸುದರ್ಶನನ ಹೊರತು ಬೇರೊಬ್ಬನನ್ನು ವರಿಸಲಾರ ಳೆಂದು ನಂಬುಗೆಯಿಂದ ಹೇಳುತ್ತಿದ್ದರು. ಹಾಗಿದ್ದರೆ ಯುದ್ಧವು ತಪ್ಪದೆಂದು ಮತ್ತೆ ಕೆಲವರು ಹೇಳುತ್ತ ಆಗ ತಾವೇನು ಮಾಡಬೇಕು ಎಂಬುದನ್ನು ಕುರಿತು ಮಥಿಸಿಕೊಳ್ಳುತ್ತಿದ್ದರು.

ಮಂಗಳವಾದ್ಯಗಳು ಮೊಳಗುತ್ತಿರಲು ಶಶಿಕಳೆ ಸ್ನಾನಮಾಡಿ, ದಿವ್ಯಾಲಂಕಾರ ಭೂಷಿತೆಯಾಗಿ ಕೈಯಲ್ಲಿ ಇಷ್ಟೇಹೂವಿನ ವರಮಾಲಿಕೆಯನ್ನು ಹಿಡಿದು ಕೊಂಡು ಗೆಳತಿಯರೊಂದಿಗೆ ಬಂದು ಒಂದು ಸ್ತಂಭದ ಬಳಿಯಲ್ಲಿ ಗಕ್ಕನೆ ನಿಂತಳು. ತಲೆ ಬಗ್ಗಿಸಿಕೊಂಡು ಏನೋ ಆಲೋಚನೆಯಲ್ಲಿರುವವಳ ಹಾಗೆ ಸುಮ್ಮನೆ ನಿಂತಿದ್ದಳು.

ಅದನ್ನು ನೋಡಿ ಅವಳ ತಂದೆ ಸುಬಾಹು ಅವಳ ಹತ್ತಿರ ಹೋಗಿ ನಗುತ್ತ, "ನೋಡಮ್ಮಾ ! ಈ ದಿನ ಇಲ್ಲಿ ಎಷ್ಟೆಷ್ಟೋ ದೊಡ್ಡ ದೊಡ್ಡ ರಾಜಕುಮಾರರು, ಮಹಾಮಹಾ ಕೀರ್ತಿವಂತರು ನಿನ್ನನ್ನು ಮದುವೆ ಯಾಗಲು ಬಂದು ಕೂಡಿದ್ದಾರೆ. ಅವರಲ್ಲಿ ಎಲ್ಲಾ ವಿಧದಲ್ಲಿಯೂ ನಿನ್ನ ಮನಸ್ಸಿಗೆ ಹಿಡಿಸಿದವನನ್ನು ಆರಿಸಿ ಮಾಲೆ ಹಾಕಿಬಿಡಮ್ಮ" ಎಂದನು. ತಂದೆಯ ಮಾತಿಗೆ ಶಶಿಕಳೆ ತಲೆಯೆತ್ತಿ ಹೀಗೆಂದಳು: "ಅಪ್ಪಾ, ಇವರೆಲ್ಲರೂ ಕೇವಲ ಕಾಮುಕರು, ಉನ್ಮತ್ತರು, ದುಷ್ಟಾತ್ಮರು, ಪಾಪಿಗಳು. ಸಾಧ್ವಿಯಾದವಳು ಇವರ ಇದಿರಿಗೆ ಬರಲೇ ಬಾರದು. ವರಮಾಲೆ ಹಿಡಿದು ಕೊಂಡು ಅನೇಕ ಮಂದಿಯ ಮುಂದೆ ಬರುವವಳು ಬೆಲೆವೆಣ್ಣಲ್ಲವೇ ? ಈ ರಾಜರ ಮಧ್ಯಕ್ಕೆ ಹೋಗಲು ನಾನು ಬೆಲೆವೆಣ್ಣೇ ಅಪ್ಪಾ ? ನಾನು ಸುದರ್ಶನನ ಸೊತ್ತು. ಇತರರನ್ನು ನೋಡುವ ಅಗತ್ಯವಾದರೂ ನನಗೇನಿದೆ ? ನನ್ನನ್ನು ನಾನೇ ಅವಮಾನಿಸಿಕೊಳ್ಳ ಬೇಕೇ ? ಪ್ರಪಂಚನೇ ತಲೆ ಕೆಳಗಾಗಿ ನಿಂತರೂ ನಾನು ಬೇರೊಬ್ಬನನ್ನು ವರಿಸಲಾರೆನು. ಆದುದರಿಂದ ಈ ದಿನವಲ್ಲದಿದ್ದರೆ ನಾಳೆಯಾದರೂ ನನ್ನನ್ನು ಸುದರ್ಶನ ನಿಗೇ ಕೊಟ್ಟು ಮದುವೆಮಾಡಿ ಕನ್ಯಾದಾನದ ಪುಣ್ಯ ಕಟ್ಟಿಕೊಳ್ಳಿರಿ ಅಪ್ಪಾ."

ಮಗಳ ಮಾತು ಕೇಳು ಕೇಳುತ್ತ ಸುಬಾಹು ರಾಜನು ಇಕ್ಕುಳದಲ್ಲಿ ಸಿಕ್ಕಿಕೊಂಡವನಂತಾದನು. ಸ್ವಯಂವರಕ್ಕೆ ಬಂದವರೆಲ್ಲಾ ಮಹಾಬಲಿಷ್ಠರಾದ ರಾಜರು. ಅಂಥವರ ಸಂಖ್ಯೆ ಅನೇಕವಾಗಿದೆ. ಹೋಗಿ ಬಿಡಿರೆಂದು ಬೇಡಿಕೊಂಡರೆ ಹೋಗುವವರಲ್ಲ. ತನ್ನ ಮಗಳು ಮೆಚ್ಚುವಂಥ ಸುದರ್ಶನನಿಗೆ ಗಾಳಿಯು ಹೊರತು ಬೇರೆ ಯಾವ ಸಹಾಯವೂ ಇಲ್ಲ. ಈ ಸ್ಥಿತಿಯಲ್ಲಿ ಇವರೆಲ್ಲರ ಕೈಯಲ್ಲಿ ತನಗೆ ಮರಣತಪ್ಪುವ ಮಾತು ಸುಳ್ಳು. ಮಗಳ ರೂಪದಲ್ಲಿ ಮೃತ್ಯು ದೇವ ತೆಯೇ ಆವನ ಪಾಲಿಗೆ ನಿಂತಿದ್ದಳು !

ತಲೆ ತುಂಬಾ ಆಲೋಚನೆಯನ್ನೂ ಭೀತಿಯನ್ನೂ ತುಂಬಿಸಿಕೊಂಡು, ಸುಬಾಹು ರಾಜರ ಮಧ್ಯಕ್ಕೆ ಹೋಗಿ ಅತ್ಯಂತ ವಿನಯದಿಂದ. ಕೈ ಜೋಡಿಸಿ, "ಘನಶಾಲಿಗಳಾದ ಮಹಾರಾಜರೇ! ದಯಾಮಯರೇ! ಮಹಾತ್ಮರೇ! ನನ್ನ ತಪ್ಪನ್ನು ಕ್ಷಮಿಸಿ ನನ್ನ ಮೇಲೆ ಅನುಗ್ರಹವಿಟ್ಟು, ನಾನು ಕೊಡುವ ಕಾಣಿಕೆಗಳನ್ನು ಸ್ವೀಕರಿಸಿಕೊಂಡು ಎಲ್ಲರೂ ದಯಮಾಡಬೇಕೆಂದು ಪ್ರಾರ್ಥಿಸುತ್ತೇನೆ. ಎಷ್ಟು ವಿಧವಾಗಿ ಹೇಳಿದರೂ ನನ್ನ ಮಗಳು ಇನ್ನೊಬ್ಬನನ್ನು ವರಿಸಲಾರೆನೆಂದೇ ಹೇಳುತ್ತಾಳೆ. ಅವಳಿಗೆ ಏನೂ ತಿಳಿಯದು. ಮುಗ್ಧೆ! ನನ್ನ ಮೂಲಕವಾಗಿ ನಿಮಗೆಲ್ಲರಿಗೂ ನಿಷ್ಕಾರಣವಾಗಿ ಶ್ರಮವಾಯಿತು. ನನ್ನ ತಪ್ಪನ್ನು ದೊಡ್ಡ ಮನಸ್ಸಿನಿಂದ ಕ್ಷಮಿಸಬೇಕೆಂದು ಪ್ರಾರ್ಥಿಸುತ್ತೇನೆ. ನಿಮಗೆಲ್ಲರಿಗೂ, ಆನೆಗಳನ್ನು, ರತ್ನಗಳನ್ನು, ಕುದುರೆಗಳನ್ನು ಗ್ರಾಮಗಳನ್ನು, ನನ್ನ ರಾಜ್ಯವನ್ನೇ ಬೇಕಾದರೂ ಹಂಚಿ ಕೊಟ್ಟುಬಿಡುತ್ತೇನೆ." ಎಂದು ಪರಿಪರಿಯಾಗಿ ಕೇಳಿಕೊಂಡನು.

ಆದರೆ ಅವನಿಗೆ ಯಾರೂ ಯಾವ ಬಗೆಯ ಸಮಾಧಾನವನ್ನೂ ಕೊಡಲಿಲ್ಲ. ಎಲ್ಲರನ್ನೂ ನೋಡಿ ಯುಧಾಜಿತ್ತು ಮಾತ್ರ ಕೋಪದಿಂದ ಹಲ್ಲುಗಳನ್ನು ಕಟಕಟನೆ ಕಡಿಯುತ್ತ, "ಏನಯ್ಯಾ ನೀನು ಹೇಳುವುದು? ಬುದ್ಧಿಯಿಲ್ಲದೆ ನಿನ್ನ ಮಗಳನ್ನು ಆ ಸುದರ್ಶನನಿಗೇ ಕೊಡಲು ನಿಶ್ಚಯಿಸಿ, ಬಂದಿರುವ ವರನ್ನೆಲ್ಲ ಹೋಗಿ ಬಿಡಿ ಎನ್ನಲಾಗದೆ, ಜಂಬುಕ ತಂತ್ರ ತೋರಿಸುವೆಯಾ? ನಮ್ಮನ್ನೆಲ್ಲಾ ಮೂರ್ಖರೆಂದುಕೊಂಡೆಯಾ? ಮೊದಲೇ ಅನುಮಾನವಿರುವಾಗ ಇಷ್ಟು ಮಂದಿಯನ್ನು ಏತಕ್ಕಾಗಿ ಕರೆಯಿಸಿದೆ? ಕರೆಯಿಸಿಕೊಂಡ ಮೇಲೆ ಈಗ ಅಳುಮೋರೆ ತೋರಿಸಿದರೆ ಏನು ಲಾಭ? ನೋಡು, ನಾನು ನಿನ್ನ ಮದವನ್ನು ಕರಗಿಸಿ, ಈ ಸುದರ್ಶನನಿಗೊಂದು ಗತಿ ಕಾಣಿಸಿ, ನನ್ನ ಮೊಮ್ಮಗನೊಂದಿಗೇ ನಿನ್ನ ಮಗಳ ಮದುವೆ ಮಾಡುತ್ತೇನೆ! ನನಗೆ ಈ ಸುದರ್ಶನನು ಉಪ್ಪೋ ಉಪ್ಪಿನ ಕಾಯಿಯೋ! ಎಲ್ಲರೂ ಒಂದಾಗಿ ಪ್ರತಿಭಟಿಸಿದರೂ ಒಂದು ನಿಮಿಷದೊಳಗೆ ಎಲ್ಲರನ್ನೂ ಜಯಿಸಿ ಬಿಡುತ್ತೇನೆ. ಹಿಂದೆ ಭರದ್ವಾಜ ಮುನಿಗೆ ಗೌರವ ಕೊಟ್ಟು ಅವನ ಪ್ರಾಣ ತೆಗೆಯದೆ ಉಳಿಸಿದ್ದೆ. ಈ ದಿನ ಅವನನ್ನು ಉಪೇಕ್ಷಿಸಲಾರೆ. ಕಾಲ ತೀರಿದುದರಿಂದಲೇ ಅವನು ಇಲ್ಲಿಗೆ ಬಂದಿದ್ದಾನೆ. ನಿನ್ನ ಮಗಳನ್ನು ನನ್ನ ಮೊಮ್ಮಗನೊಂದಿಗೇ ಮದುವೆ ಮಾಡಿ, ನಿನ್ನನ್ನೂ ನಿನ ರಾಜ್ಯವನ್ನೂ ಕಾಪಾಡಿಕೋ! ಇಲ್ಲಾ, ನಿನ್ನ ಮಗಳನ್ನು ಸಭೆಯ ಮುಂದೆ ಬಂದು ಸುದರ್ಶನನ ಹೊರತು ಬೇರೆಯಾರನ್ನಾದರೂ ವರಿಸಿಕೊಳ್ಳಲು ಹೇಳು. ಬೇರೆ ಮಾತಿಗೆ ಅವಕಾಶವೇ ಇಲ್ಲ!" ಎಂದನು.





# ಅಲಸನ ಬೇಸಾಯ

ಹಿಂದೆ ಒಂದು ಊರಿನಲ್ಲಿ ನಾರ್ಣಪ್ಪನೆಂಬ ಬೇಸಾಯಗಾರನಿದ್ದ. ಬೇಸಾಯಗಾರರ ಮನೆತನದಲ್ಲಿ ಹುಟ್ಟಿದುದರಿಂದ ಅವನೂ ಬೇಸಾಯಗಾರನೆನಿಸುವನೇ ಹೊರತು, ಅವನೊಬ್ಬ ದೊಡ್ಡ ಅಲಸಿ. ಎಷ್ಟು ದೊಡ್ಡ ಅಲಸುಗಾರನಾಗಿದ್ದನೋ, ಅಷ್ಟು ದೊಡ್ಡ ದಂಭಾಧಿಕಾರಿಯೂ ಆಗಿದ್ದನು. ಅಂದರೆ ತನಗೆ ಬೇಸಾಯದಲ್ಲಿ ಬಹಳ ಸಾಮರ್ಥ್ಯವಿದೆಯೆಂದು ನಂಬುಗೆಯನ್ನು ಪ್ರದರ್ಶಿಸುವುದರಲ್ಲಿ ಸ್ವಲ್ಪವೂ ಹಿಂಜರಿಯುತ್ತಿದ್ದಿಲ್ಲ.

ಅವನ ಕಣ್ಣೆದಿರಿನಲ್ಲೇ ಅವನ ತಂದೆ ವರ್ಷವಿಡೀ ದುಡಿಯುತ್ತಿದ್ದರೂ ಅವನು ಮಾತ್ರ ಹರಟೇ ಕಟ್ಟೆಯಲ್ಲಿ ಸೋಮಾರಿಗಳ ನಡುವೆ ಭಾರಿ ಭಾರಿ ನಾಲಗೆಯ ಕೊಚ್ಚಾಟ ನಡೆಸಿಕೊಳ್ಳುತ್ತಿರುವನು.

"ನೀನು ಕೂಡಾ ಎಲ್ಲರ ಹಾಗೆ ಬೇಸಾಯದ ಕೆಲಸದಲ್ಲಿ ನಿನ್ನ ತಂದೆಗೆ ಸ್ವಲ್ಪ ಸಹಾಯ ಮಾಡಬಾರದೇನು? ನಿನಗೆ ಬೇಸಾಯ ಮಾಡಿಸಲಿಕ್ಕೂ ಗೊತ್ತು. ನಿನ್ನ ತಂದೆಗೆ ಸ್ವಲ್ಪ ವಿಶ್ರಾಂತಿ ಕೊಡಬಾರದೇನು? ಅವರಾದರೂ ಎಷ್ಟೂ ಅಂತ ದುಡಿದಾರು?" ಎಂದು ಯಾರಾದರೂ ದೊಡ್ಡವರು ಬುದ್ಧಿ ಹೇಳಿದರೆ, ನಾರ್ಣಪ್ಪನು ಅದೊಂದು ಸಣ್ಣ ವಿಷಯದ ಹಾಗೆ, "ಏನು ಮಹಾ ವ್ಯವಸಾಯವೋ! ಅದಕ್ಕಾಗಿ ವರ್ಷವಿಡೀ ಕಷ್ಟಪಡಬೇಕನ್ನುವಿರೇನು? ತಂದೆಯವರು ಕಡ್ಡಿಯನ್ನೇ ಗುಡ್ಡ ಮಾಡಿದ ಹಾಗೆ ಬೇಕಂತ ಮೈ ಮೇಲೆ ತಂದುಕೊಳ್ಳುತ್ತಾರೆ. ನಾನು ಬೇಸಾಯ ಮಾಡಿಸಿದೆನೆಂದರೆ, ಮನೆಯಿಂದ ಹೊರಗೆ ಕಾಲಿಡದೆ ನಿಮ್ಮೆಲ್ಲರಿಗಿಂತ ಕಡಿಮೆ ಖರ್ಚಿನಲ್ಲಿ ಬೆಳೆ ತೆಗೆಯಬಲ್ಲೆ ಗೊತ್ತಾ?" ಎನ್ನುವನು.

ತನ್ನ ಮಗನ ರೀತಿ ತಂದೆಗೆ ತುಂಬಾ ಬೇಸರ ತಂದಿತು. ತಾನು ಮನೆಯಲ್ಲಿ ಕೈ ಕಾಲಾಡಿಸಿಕೊಂಡಿರುವಾಗ ಮಗನು ತನ್ನ ಉದಾಸೀನವನ್ನು ಬಿಡಲಾರನೆಂದುಕೊಂಡು, ಕಡೆಗೆ ಅವನ ತಂದೆ ಬೇಸಾಯದ ಕೆಲಸವನ್ನು ಮಗನಿಗೇ ಒಪ್ಪಿಸಿ, ಒಂದು ವರ್ಷ ತೀರ್ಥಯಾತ್ರೆ ಮಾಡಿಬರುವೆನೆಂದು ಹೇಳಿ ಹೊರಟುಹೋದನು. ಈಗ ನಾರ್ಣಪ್ಪ ಬೇಸಾಯಕ್ಕೆ ಇಳಿಯಲೇ ಬೇಕಾಯಿತು.

ತಾನು ಎಷ್ಟು ಸುಲಭವಾಗಿ ಬೇಸಾಯ ಮಾಡಿಸುವೆನೆಂದು ತೋರಿಸಲು ಒಳ್ಳೆಯ ಸಂದರ್ಭ ಬಂದಂತಾಯಿತು ನಾರ್ಣಪ್ಪನಿಗೆ. ಮೊದಲು ಕಳ

ಜಿ. ಸಾಂಬ



ದಲ್ಲಿ ಬೀಜ ಬಿತ್ತುವ ಕೆಲಸವಾಗಬೇಕಿತ್ತು. ಈ ಸಣ್ಣ ಕೆಲಸಕ್ಕೆ ತಾನೇ ಸ್ವತಃ ಕಳಗದ್ದೆಗಿಳಿಯುವ ಅವಶ್ಯ ವಿಲ್ಲವೆಂದುಕೊಂಡು ನಾರ್ಣಪ್ಪನು, ಪಕ್ಕದ ಕಳದ ರಾಮಯ್ಯನ ಬಳಿಗೆಹೋಗಿ, "ನೋಡಿ, ರಾಮ್ಮಾವಾ, ನೀವು ಹೇಗೂ ಕಳದಲ್ಲಿ ಬೀಜ ಚೆಲ್ಲುತ್ತೀರಪ್ಪ? ಸ್ವಲ್ಪ ನನ್ನ ಬೀಜಗಳನ್ನೂ ಇಷ್ಟು ಚೆಲ್ಲಿಬಿಡಿ. ಆಳಿನ ಹತ್ತಿರ ಬೀಜ ಕಳಿಸುತ್ತೇನೆ. ನಿಮ್ಮ ಕೈಯಿಂದ ಬಿತ್ತಿದರೆ ಸಸಿಗಳು ಚೆನ್ನಾಗಿ ಬರುತ್ತದೆಂದು ಅಪ್ಪ ಹೇಳುತ್ತಾರೆ. ಅಷ್ಟೊಂದು ನೀವೇ ಮಾಡಿ, ನಿಮ್ಮ ಪುಣ್ಯ" ಎಂದನು.

ರಾಮಯ್ಯನು ನಾರ್ಣಪ್ಪನನ್ನು ಒಂದು ಸಾರಿ ಮೇಲಿಂದ ಕೆಳಗಿನವರೆಗೆ ನೋಡಿ, "ಹಾಗೇ ಆಗಲಪ್ಪ. ಈ ಸಣ್ಣ ಕೆಲಸಕ್ಕೆ ಇಷ್ಟೆಲ್ಲಾ ಹೇಳಬೇಕೇ? ನಿನಗೇನು ಸಹಾಯ ಬೇಕಾದರೂ ಹೇಳು. ತಪ್ಪದೆ ಮಾಡು ತ್ತೇನೆ. ದಾಕ್ಷಿಣ್ಯಪಡಬೇಡ" ಎಂದನು. ಆ ವಿಧವಾಗಿ ನಾರ್ಣಪ್ಪನಿಗೆ ಕೆಸರಲ್ಲಿ ನಿಂತು ಬೀಜಚೆಲ್ಲುವ ಕಾಟ ತಪ್ಪಿತು. ತನ್ನ ಬುದ್ಧಿವಂತಿಕೆಗೆ ತನ್ನನ್ನು ತಾನೇ ಹೊಗಳಿ ಕೊಂಡನು. ಸಸಿಬೆಳೆದು ನಟ್ಟಿಗೆ ತಯಾರಾದಾಗ, ನಾರ್ಣಪ್ಪ ಮತ್ತೆ ಕೇಳಿಕೊಂಡಂತೆ ರಾಮಯ್ಯನೇ ನೇಜಿ ಕೀಳಿಸಿ ನಟ್ಟಿಯನ್ನೂ ಮುಗಿಸಿಕೊಟ್ಟನು.

ಮುಂದೆ ಕೂಲಿಯಾಳುಗಳಿಂದ ಕಳೆ ಕೀಳುವ ಕೆಲಸವೂ ಮುಗಿಯಿತು. ಯಾವುದಕ್ಕೂ ನಾರ್ಣಪ್ಪನು ಕೆಸರು ತುಳಿಯಲಿಲ್ಲ. ಬೆನ್ನು ಬಗ್ಗಿಸಲೂ ಇಲ್ಲ. ಬೇರೆ ಯವರನ್ನೇ ಹೊಗಳಿ ಮಾಡಿಸಿಬಿಟ್ಟ.

ಪೈರುಗಳಿಗೆ ತೆನೆ ಬರುವಾಗ, ಒಂದು ದಿನ ಬೆಳಿಗ್ಗೆ ಕೊರವನೊಬ್ಬ ನಾರ್ಣಪ್ಪನ ಬಳಿಗೆಬಂದು, ಕೈಮುಗಿದು ನಮಸ್ಕಾರ ಮಾಡಿ, "ದೊರೆಗಳೇ, ಪ್ರತಿವರ್ಷ ನಿಮ್ಮ ಹೊಲಗಳಲ್ಲಿ ನಾನೇ ಇಲಿಗಳನ್ನು ಹಿಡಿಯುತ್ತೇನೆ. ನಾಳೆ ಬೆಳಿಗ್ಗೆ ಇಲಿಗಳನ್ನು ಹಿಡಿದು ಹಾಕಲೇ?" ಎಂದು ಕೇಳಿದನು.

"ಇಲಿಗೆ ಎಷ್ಟು ಕೇಳುತ್ತಿ?" ಎಂದು ನಾರ್ಣಪ್ಪನು ಕೇಳಿದನು. "ಎಲ್ಲರ ಹಾಗೇ ನೀವೂ ಕೊಡಿರಿ ಬುದ್ಧಿ. ಇಲಿಯೊಂದಕ್ಕೆ ನಾಲ್ಕಾಣೆಯ ಹಾಗೆ ಕೊಡುತ್ತಾ ರಲ್ಲಾ? ನಾನೇಕೆ ಹೆಚ್ಚಿಗೆ ಹೇಳೇನು ಬುದ್ಧಿ?" ಎಂದನು ಕೊರವ. "ಇಲಿಗೆ ಮೂರಾಣೆ ಕೊಡು ತ್ತೇನೆ" ಎಂದನು ನಾರ್ಣಪ್ಪ.

"ಹಾಗೇ ಕೊಡಿ ದೊರೇ!" ಎಂದ ಕೊರವ. ಮರುದಿನ ಆ ಕೊರವ ಅರುವತ್ತೆರಡು ಸತ್ತ ಇಲಿ ಗಳನ್ನು ತಂದು ನಾರ್ಣಪ್ಪನಿಗೆ ತೋರಿಸಿ, ಇಲಿಯೊಂದಕ್ಕೆ ಮೂರಾಣೆ ಲೆಕ್ಕದಲ್ಲಿ ಹಣವನ್ನು ಪಡೆದು ಹೊರಟು ಹೋದನು. ಹೋಗುತ್ತಾ ತಿರುಗಿ ನಿಂತು, ಕೆಯ್ ಹೊಡೆಯುವಾಗ ಬರುತ್ತೇನೆಂತಲೂ ಹೇಳಿದನು.

ಎಲ್ಲರೂ ಇಲಿಯೊಂದಕ್ಕೆ ನಾಲ್ಕಾಣೆ ಕೊಟ್ಟರೆ ತಾನು ಮೂರಾಣೆಯಂತೆ ಕೊಟ್ಟು ಇಲಿಗಳ ಕಾಟ ಹೋಗಲಾಡಿಸಿಕೊಂಡೆನೆಂದು ನಾರ್ಣಪ್ಪನು ತನ್ನನು ತಾನೇ ಅಭಿನಂದಿಸಿಕೊಂಡನು.

ಒಂದು ದಿನ ನಾರ್ಣಪ್ಪ ಹರಟೆ ಕಚೇರಿ ನಡೆಸಿ ಕೊಂಡಿರುವಾಗ, ಸಮೀಪದ ಮನೆಯ ರೈತ ಕಿಟ್ಟಪ್ಪ ಅವನ ಬಳಿಗೆ ಬಂದು, "ನೋಡು ನಾರ್ಣಪ್ಪಾ. ಪೈರುಗಳಿಗೆಲ್ಲ ಹುಳಹಿಡಿಯುವಹಾಗಿದೆ. ಒಂದುಸಾರಿ ಮದ್ದು ಚಿಮುಕಿಸುವುದು ಒಳ್ಳೇದು. ಬೇಗನೇ ಆ ಕೆಲಸ ನೋಡಪ್ಪಾ ಉದಾಸೀನ ಮಾಡಿದರೆ ಹೊಲಕ್ಕೆಲ್ಲಾ ಬೆಂಕಿ ಹಿಡಿದ ಹಾಗೇ ಅಂದುಕೋ!" ಎಂದನು.

ನಾರ್ಣಪ್ಪನು ಕೂಡಲೇ ಕಿಟ್ಟಪ್ಪನೊಂದಿಗೆ, "ಹಾಗೇನು? ಸರಿ, ನೀವು ಯಾವಾಗ ನಿಮ್ಮ ಹೊಲಕ್ಕೆ ಮದ್ದು ಚಿಮುಕಿಸುವಿರೋ ಹೇಳಿ. ನಾನೂ ಆಗಲೇ ಏರ್ಪಾಡು ಮಾಡುತ್ತೇನೆ" ಎಂದನು,

"ನಾನು ನಾಳೆ ಬೆಳಿಗ್ಗೆಯೇ ಚಿಮುಕಿಸಿ ಬಿಡುತ್ತೇನೆ. ತಡಮಾಡುವುದು ಒಳ್ಳೇದಲ್ಲ. ಅದರ ಅಳತೆ ಲೆಕ್ಕ ಕ್ರಮ ತಿಳೀಬೇಕಾದರೆ ನೀನೂ ಬಂದು ನೋಡು" ಎಂದನು ಕಿಟ್ಟಪ್ಪ.

ನಾರ್ಣಪ್ಪ ಸ್ವಲ್ಪ ಮೇಲೆ ಕೆಳಗೆ ನೋಡಿ, "ಅಂದ ಹಾಗೆ ಕಿಟ್ಟಪ್ಪಯ್ಯಾ, ಈ ವಿಷಯದಲ್ಲಿ ನನಗೊಂದು ಸಣ್ಣ ಸಹಾಯವೇ ಮಾಡಬೇಕಲ್ಲಾ. ನಾಳೆ ಬೆಳಿಗ್ಗೆ ನನಗೊಂದು ಕೆಲಸವಿದೆ, ನಿಮ್ಮ ಹೊಲಕ್ಕೆ ಮದ್ದು ಚಿಮುಕಿಸಿದ ಕೈಯಲ್ಲೇ ಸ್ವಲ್ಪ ನನ್ನ ಹೊಲಕ್ಕೂ ಚಿಮುಕಿಸಿ ಬಿಡಿರೇನು? ಹಣ ಈಗಲೇ ಕೊಟ್ಟು ಬಿಡುತ್ತೇನೆ" ಎಂದನು.

"ಅಷ್ಟೊಂದು ಸಹಾಯ ಮಾಡದಿರುವವನೋ ನಾನು?" ಎಂದು ಕಿಟ್ಟಪ್ಪ ಮದ್ದು ಚಿಮುಕಿಸಲು ಸಂತೋಷವಾಗಿ ಒಪ್ಪಿ, ಹಣವನ್ನು ಪಡೆದುಕೊಂಡು ಹೋದನು.

ಮುಂದೆ ಪೈರು ಮುದುರಿ ಹಣ್ಣಾಗಿ ಕೊಯಿಲಿಗೆ ಬಂದಾಗಲೂ ನಾರ್ಣಪ್ಪ ಹೊಲಕ್ಕೆ ಹೋಗದೆಯೇ ಕೊಯಿಲೂ ನಡೆಯಿತು. ಇಷ್ಟೊಂದು ಸಲೀಸಾಗಿ ನಡೆದು ಹೋಗುವ ಬೇಸಾಯಕ್ಕಾಗಿ ಎಲ್ಲರೂ ಏತಕ್ಕೆ



ಅಷ್ಟೊಂದು ಹಾರಾಡುವರೋ ಎಂದು ನಾರ್ಣಪ್ಪನಿಗೆ ಅರ್ಥವಾಗಲಿಲ್ಲ. ಅವನಿಗೆ ಈಗ ತನ್ನ ಸಾಮರ್ಥ್ಯದಲ್ಲಿ ಪೂರ್ತಿ ನಂಬುಗೆ ಉಂಟಾಯಿತು. ಹರಟೇ ಕಚೇರಿಯಲ್ಲಿ ಬೇಸಾಯವು ಎಷ್ಟು ಲೀಲಾಜಾಲದ ಕೆಲಸವೆಂಬುದನ್ನು ತೃಪ್ತಿಯಾಗುವಷ್ಟು ಕೊಚ್ಚಿದ.

ಕೆಯ್ ಹೊಡೆಯುವಾಗ ರಾಮಯ್ಯನೂ ಕಿಟ್ಟಪ್ಪನೂ, ಇಲಿಹಿಡಿಯುವ ಕೊರವನೂ ನಾರ್ಣಪ್ಪನ ಆಳೂ ನೋಡಿಕೊಳ್ಳುವರಾದರೂ, ಬತ್ತದ ರಾಶಿ ಬೀಳುವಾಗ ತಾನೂ ಹತ್ತಿರವಿಲ್ಲದಿದ್ದರೆ ಚೆನ್ನಾಗಿರುವುದಿಲ್ಲವೆಂದುಕೊಂಡು ನಾರ್ಣಪ್ಪನೂ ಹೊಲಕ್ಕೆ ಹೋದನು.

ಅಲ್ಲಿ ಇನ್ನೂ ಕೆಲಸ ಪ್ರಾರಂಭವಾಗಿರಲಿಲ್ಲ. ಎಲ್ಲರೂ ಕುಳಿತುಕೊಂಡು ಏನೋ ಮಾತುಕತೆಯಾಡಿ ಕೊಂಡಿದ್ದರು. ಅವರ ಮಾತಿನಲ್ಲಿ ತನ್ನ ಹೆಸರು ಬಂದುದರಿಂದ ನಾರ್ಣಪ್ಪನು ಒಮ್ಮೆಗೇ ಅವರ

ಮುಂದೆ ಹೋಗದೆ ಬೇಲಿಯ ಹಿಂದೆನಿಂತು ಕಿವಿಗೊಟ್ಟು ಅವರ ಮಾತುಗಳನ್ನು ಕೇಳ ತೊಡಗಿದನು.

"ಒಳ್ಳೇ ನಾರ್ಣಪ್ಪ ಸಿಕ್ಕಿದನಪ್ಪ ನಮಗೆ! ಅವನ ಪುಣ್ಯದಿಂದ ನನಗೆ ಈ ವರ್ಷ ನೇಜಿನಟ್ಟಿ ಖರ್ಚುಗಳೆಲ್ಲಾ ಉಳಿದು ಶ್ರಮವೂ ತಗ್ಗಿತು. ನನಗೆ ಬೇಕಾದ ನೇಜಿ ಕೂಡಾ ಅವನಿಂದಲೇ ಗಿಟ್ಟಿಸಿ ಬಿಟ್ಟೆ. ಕೂಲಿ ಕೂಡಾ ಅವನ ಕೈಯಿಂದಲೇ ಹಾಕಿಸಿದೆ. ನಿನಗೆಷ್ಟು ಗಿಟ್ಟಿತಪ್ಪಾ, ಗೋಪೂ?" ಎಂದು ರಾಮಯ್ಯ ನಾರ್ಣಪ್ಪನ ಆಳನ್ನು ಕೇಳಿದನು.

ಅವನು ಹಲ್ಲು ಗಿಂಜುತ್ತ "ನಾನೇನು ಗಿಟ್ಟಿಸಿಕೊಂಡೇನು ಬಿಡೀ! ಹತ್ತು ಮಂದಿ ಕೂಲಿಗಳನ್ನು ಕಳಿಕೀಳಲು ಇಟ್ಟು ಹದಿನೈದು ಮಂದಿ ಅಂತ ಲೆಕ್ಕ ಹೇಳಿದೆ" ಎಂದನು.

"ನನ್ನ ಹೊಲಕ್ಕೆ ಹುಳುಹತ್ತಿದಾಗ ಮದ್ದು ತಕ್ಕೊಳ್ಳಲಿಕ್ಕೆ ನನ್ನ ಕೈಯಲ್ಲಿ ದಮ್ಮಿಡಿ ಇರಲಿಲ್ಲ. ಈ ಪುಣ್ಯಾತ್ಮನ ನೆನಪು ಬಂತು. ಮದ್ದು ಚಿಮುಕಿಸಬೇಕಪ್ಪ ನಾರ್ಣಪ್ಪ ಅಂದೆ. ನೀವೇ ಚಿಮುಕಿಸಿ ಬಿಡೀ ಅಂತ ಕೇಳಿದಷ್ಟು ಹಣ ಕೊಟ್ಟು ಬಿಟ್ಟ. ದೊಡ್ಡ ಸೋಮಾರಿ ಬಿಡಿ. ಹುಳುಹಿಡಿದದ್ದು ನಿಜವೋ ಸುಳ್ಳೋ ಅಂತ ನೋಡಲಿಕ್ಕೂ ಬರಲಿಲ್ಲ ಪುಣ್ಯಾತ್ಮ! ಅವನಿಂದ ನನ್ನ ಪೈರು ಉಳೀತು!" ಎಂದು ಕಿಟ್ಟಪ್ಪ ಕಿಟ ಕಿಟ ನಗುತ್ತ ಕಣ್ಣು ಕಿಸಿದ.

"ಇಂಥಾ ಆಲಸ್ಯಗಾರರು ಒಬ್ಬೊಬ್ಬರಿದ್ದರೆ ನಮಗೂ ಒಳ್ಳೇದೇ. ನಾನು ಇಡೀದಿನ ನಾಲ್ಕಾರು ಹೊಲಗಳಲ್ಲಿ ಇಲಿಗಳನ್ನು ಹಿಡಿದೆ. ಒಟ್ಟು ಅರುವತ್ತೆರಡು ಸಿಕ್ಕುವು. ಅವರ ಹತ್ತಿರ ಹಣ ಪಡೆದುಕೊಂಡ ಮೇಲೆ. ಆ ಎಲ್ಲಾ ಇಲಿಗಳನ್ನು ಒಯ್ದು ನಾರ್ಣಪ್ಪನವರಿಗೆ ತೋರಿಸಿ ಇವಿಷ್ಟೂ ನಿಮ್ಮ ಹೊಲದ್ದೇ ಅಂದೆ. ನಂಬಿಯೇ ಬಿಟ್ಟರು. ಎಲ್ಲರೂ ಒಂದು ಇಲಿಗೆ ನಾಲ್ಕಾಣೆ ಕೊಟ್ಟರೆ ತಾನು ಚೌಕಾಸಿಮಾಡಿ ಮೂರಾಣೆಗೆ ಲಾಭದಲ್ಲಿ ಕೆಲಸ ಮಾಡಿಸಿದೆನೆಂದು ಅವರು ಜಂಬ ಹೊಡೆದುಕೊಂಡರೂ ಅವರ ಹೊಲದಲ್ಲಿ ಸಿಕ್ಕಿದ್ದು ಹತ್ತೇ ಇಲಿಗಳು" ಎಂದ ಕೊರವ.

"ಸರಿಸರಿ. ನಮ್ಮೊಳಗೆ ನಾವು ಮುಚ್ಚುಮರೆ ಮಾಡಿಕೊಳ್ಳಲಿಲ್ಲವಷ್ಟೇ. ಅದೇ ಮುಖ್ಯ. ಇನ್ನು ಕೆಲಸ ಪ್ರಾರಂಭಿಸೋಣ" ಎಂದು ಹೇಳಿ ರಾಮಯ್ಯ ಎದ್ದನು.

ಮರೆಯಲ್ಲಿದ್ದು ಆ ಮಾತುಗಳೆಲ್ಲವನ್ನೂ ಕೇಳಿಸಿಕೊಂಡ ನಾರ್ಣಪ್ಪನ ಗುಂಡಿಗೆಯೇ ಜಾರಿ ಹೋಯಿತು. ನಾಲಗೆ ಬಿದ್ದು ಹೋಯಿತು. ಬುದ್ಧಿ ಮೇಲೆದ್ದು ಚೆನ್ನಾಗಿ ಚುಚ್ಚಿತು, ಅವನ ಆಲಸ್ಯವೂ ಓಡಿ ಹೋಯಿತು. ಮರು ವರ್ಷದಲ್ಲಿ ಅವನು ತಂದೆಗೆ ಸ್ವಲ್ಪವೂ ಕಡಿಮೆಯವನಾಗದಂತೆ ಸ್ವತಃ ದುಡಿದು ಬದುಕುವವನಾದನು.



# ಗಯ್ಯಾಳಿ ಹೆಂಡತಿ

ಒಂದು ಗ್ರಾಮದ ರಾಮಣ್ಣನೆಂಬ ಯುವಕನು, ಒಬ್ಬಳ ಅಂದ ಚೆಂದಗಳಿಗೆ ಮೋಹಿಸಿ ಮದುವೆಯಾಗಿ ಸಂಸಾರ ನಡೆಸುವಾಗ, ಅವಳು ಮಹಾ ಗಯ್ಯಾಳಿ ಎಂದು ಗೊತ್ತಾಯಿತು. ಅವನಿಗೆ ಮನೆ ನರಕವಾಯಿತು. ಅವನು ತನ್ನ ಕಷ್ಟಗಳನ್ನು ತನ್ನ ಸ್ನೇಹಿತನೊಂದಿಗೆ ಹೇಳಿಕೊಂಡನು.

ಊರೊಳಗೆ ಒಬ್ಬರು ಸಾಧುಗಳು ಬಂದಿದ್ದಾರೆಂದೂ, ಎಲ್ಲರೂ ಅವರ ಹತ್ತಿರ ತಮ್ಮ ಕಷ್ಟಗಳನ್ನು ಹೇಳಿಕೊಂಡು, ಕಷ್ಟ ನಿವಾರಣೆಯ ಉಪಾಯ ತಿಳಿದುಕೊಳ್ಳುವರೆಂದೂ ಆ ಸ್ನೇಹಿತನು ರಾಮಣ್ಣನಿಗೆ ಹೇಳಿದ. ರಾಮಣ್ಣನು ಆ ಸಾಧುವಿನ ಬಳಿಗೆ ಹೋಗಿ ತನ್ನ ಕಷ್ಟ ಹೇಳಿಕೊಂಡನು.

ಅದನ್ನು ಕೇಳಿ ಸಾಧು, "ಅಪ್ಪಾ, ನಾನುಕೂಡಾ ನಿನ್ನ ಹಾಗೆಯೇ ಗಯ್ಯಾಳಿ ಹೆಂಡತಿಯೊಂದಿಗೆ ಬಾಳಲಾಗದೆ ಸನ್ಯಾಸಿಯಾಗಿ ತಿರುಗುತ್ತಿದ್ದೇನೆ. ನಿನಗೇನು ಆಲೋಚನೆ ಕೊಡಬಲ್ಲೆ ?" ಎಂದರು.

ತರುವಾಯ ರಾಮಣ್ಣನು ಪಕ್ಕದ ಊರಿಗೆ ದಯಮಾಡಿಸಿದ ನಿತ್ಯಾನಂದ ಸ್ವಾಮಿಗಳ ಬಳಿಗೆ ಹೋಗಿ ಅಡ್ಡ ಬಿದ್ದು ತನ್ನ ಗೋಳನ್ನು ಹೇಳಿಕೊಂಡನು.

"ಅಪ್ಪಾ, ನಾನು ಶತ ದರಿದ್ರದವನು. ಆದ್ದರಿಂದ ನನಗೆ ಮದುವೆಯೇ ಆಗಲಿಲ್ಲ, ಸಂಸಾರದ ವಿಷಯ ನಾನರಿಯೆ. ನಿನಗೆ ಆಲೋಚನೆ ಹೇಳುವ ಅರ್ಹತೆಯೂ ನನಗಿಲ್ಲ" ಎಂದರು ನಿತ್ಯಾನಂದರು.

ರಾಮಣ್ಣ ಅಲ್ಲಿಂದ ಒಂದು ಹಳೆಯ ಮನೆಯ ಸಮೀಪದಲ್ಲಿ ಕುಳಿತುಕೊಂಡು ಆಲೋಚಿಸುತ್ತಿರುವಾಗ, ಯಾರೋ ಹಿಂದಿನಿಂದ ಬಂದು ಅವನ ಹೆಗಲ ಮೇಲೆ ಕೈಹಾಕಿ "ಏನಪ್ಪಾ, ಏನು ಕಷ್ಟ ಬಂತು ನಿನಗೆ ? ನನ್ನನ್ನು ಚಂದ್ರಯ್ಯ ಅನುತ್ತಾರೆ, ನನ್ನ ಹತ್ತಿರ ಹೇಳು" ಎಂದನು.

ರಾಮಣ್ಣ ಚಂದ್ರಯ್ಯನೊಂದಿಗೆ ತನ್ನ ಕಷ್ಟ ಹೇಳಿಕೊಂಡನು.

ಅದನ್ನು ಕೇಳಿ ಚಂದ್ರಯ್ಯ ತಬ್ಬಿಬ್ಬಾಗಿ, "ನಾನು ನನ್ನ ಗಯ್ಯಾಳಿ ಹೆಂಡತಿಯ ಕಾಟ ಸೈಸದೆ ಆತ್ಮಹತ್ಯ ಮಾಡಿಕೊಂಡೆ ಗೊತ್ತಾ ? ಈಗ ಆ ನನ್ನ ಹೆಂಡತಿ ಸಾವು ಬದುಕಿನ ಅಂಚಿನಲ್ಲಿದ್ದಾಳೆ. ಅವಳು ಸತ್ತು ಎಲ್ಲಿ ನನ್ನ ಬೆನ್ನು ಬೀಳುತ್ತಾಳೋ ಅಂತ ಭಯವಾಗಿದೆ. ನೀನೂ ನನ್ನ ಸಹಾಯಕ್ಕೆ ಬಾ, ಬಂದು ಬಿಡು ! ಬೇಗ ಹಗ್ಗವನ್ನೋ, ಭಾವಿಯನ್ನೋ ನೋಡಿಕೋ !" ಎಂದು ಹೇಳುತ್ತಾ ಮಾಯವಾದನು.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

### ಗೆದ್ದ ಶೀರ್ಷಿಕೆಗಳು ೧೯೭೭ ಸೆಪ್ಟೆಂಬರ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ







Gopal Shroti

Mchan D. Desai

- ★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.
- ★ ಜುಲೈ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.
- ★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪಾಯಿ ೨೫ ಬಹುಮಾನ.
- ★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಆದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು - ೬೦೦೦೨೬

---

### ಮೇ ಸ್ಪರ್ಧೆಯ ಫಲಿತಾಂಶ:

ಮೊದಲನೇ ಫೋಟೋ: ತುಟಿಗಿಟ್ಟರಾಗಲ್ಲ, ಕಚ್ಚಿ ಹೀರಿದರಷ್ಟೇ ರಸಬರುತ್ತೆ

ಎರಡನೇ ಫೋಟೋ : ನೋಡಿದರಾಗಲ್ಲ, ಅತ್ತು ಕೂಗಿದರಷ್ಟೇ ಬಾಯಿಗೆ ಬರುತ್ತೆ

ಕಳುಹಿಸಿದವರು: ಎಸ್. ಅರುಣಾ, ೪೫೬, ಬೆಲ್‌ಕಾಲನಿ, ಜಾಲಹಳ್ಳಿ, ಬೆಂಗಳೂರು ೩೦

**Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 2 & 3, Arcot Road, Madras-600 026 (India). Controlling Editor : NAGI REDDI.**




Join




# Carona STAMP COLLECTORS' CLUB

FREE

**Easy Membership! Unique benefits!**

Get details from your nearest
Carona Retail Shop or write to:

**CARONA STAMP COLLECTORS' CLUB**

17, 18, Saleh Ahmed Building,
Infantry Road, Bangalore 560 001.

**Take advantage of this opportunity now.**

**Membership open to residents of Karnataka State only**

CHAITRA CS-153

1979




ಹೂವುಗಳೆಂದರೆ ನಮಗೆ ತುಂಬಾ ಪ್ರೀತಿ–ಚಿಕ್ಕ, ಹಸುರು ಎಲೆಗಳಿಂದ ಕೂಡಿದ, ಎಳೆಗೆಂಪು ಬಣ್ಣದ ಚಿಕ್ಕ ಚಿಕ್ಕ ಹೂವುಗಳು! ಎಷ್ಟು ಸುಂದರವಾಗಿವೆ ಅವು!

ಹೀಗಾಗಿ ನಾವು ಫ್ಲೋರಾ ಪೆನ್ಸಿಲುಗಳನ್ನು ಮೆಚ್ಚುವುದರಲ್ಲಿ ಆಶ್ಚರ್ಯವಿಲ್ಲ. ನನ್ನ ಹುಟ್ಟು ಹಬ್ಬಕ್ಕೆ ನಮ್ಮ ಅಮ್ಮ ಫ್ಲೋರಾ ಪೆನ್ಸಿಲುಗಳ ಒಂದು ಪೆಟ್ಟಿಗೆಯನ್ನೆ ತಂದುಕೊಟ್ಟಳು, ಗೊತ್ತೇನು?

ಆ ಪೆನ್ಸಿಲುಗಳು ಎಲ್ಲರಿಗೂ ಬಹಳ ಇಷ್ಟವಾದುವು. ಸಂಜೆಯಾಗುವಾಗ ಒಂದು ಪೆನ್ಸಿಲು ಮಾತ್ರ ಉಳಿದಿತ್ತು, ಬಾಕಿ ಎಲ್ಲ ಕಾಣೆಯಾಗಿದ್ದುವು. ಆದರೂ ನನಗೇನೂ ಬೇಸರವಿಲ್ಲ. ಅವರೆಲ್ಲ ನನ್ನ ಗೆಳೆಯರು ತಾನೇ!

ಫ್ಲೋರಾ ಪೆನ್ಸಿಲುಗಳನ್ನು ಕೊಳ್ಳದೆ ಇರಲು ಮನಸ್ಸು ಕೇಳುವುದಿಲ್ಲ. ಅಷ್ಟು ಅಂದವಾಗಿವೆ ಅವು. ಅವು ತುಂಡಾಗುವುದೂ ಇಲ್ಲ.



ಕ್ಯಾಮ್ಲಿನ್ ಪ್ರೈವೇಟ್ ಲಿಮಿಟೆಡ್,
ಆರ್ಟ್ ಮಟೀರಿಯಲ್ ಡಿವಿಜನ್,
ಬೊಂಬಾಯಿ-400 056-
ಕ್ಯಾಮೆಲ್ ಆರ್ಟ್
ಮಟೀರಿಯಲ್‌ಗಳ ತಯಾರಕರಿಂದ




# ಕ್ಯಾಮ್ಲಿನ್ ಫ್ಲೋರಾ
ಪೆನ್ಸಿಲುಗಳು

VISION 793 KAN

**Results of Chandamama—Camlin Colouring Contest No. 8 (Kannada)**

*1st Prize* : Karuna Venkateshrao Karne, Gadag. *2nd Prize* : N. Umashankar, Mysore. *3rd Prize* : S. S. Mohan, Mysore. *Consolation Prizes* : Jaywant L. Shanbhag, Karnataka: Damodar N. Gadakari, Nimapni; R. Meenakshi, Bangalore; M. B. Ravikumar, Sullia, B. H Bhagavati, Nidagundi.



# ಕರಡಿಕೆಂಗಣ್ಣ

೧೨

[ದುರ್ಮುಖರಾಜನ ಕೋಟೆಯನ್ನು ಆಕ್ರಮಿಸಿದ ಸಾಮಂತನು ಕಟುಕಭಲ್ಲೂಕನೇ ಮೊದಲಾದವರ ಮೇಲೆ ಸೈನಿಕರನ್ನು ಕಳುಹಿಸಿದನು. ಆ ಸೇನಾ ನಾಯಕನ ಹತ್ತಿರ ಕಳ್ಳ ನಾಗಮಲ್ಲನು ತಾನು ದುರ್ಮುಖನನ್ನು ಬಂಧಿಸಿ ತಂದಿರುವೆನೆಂದನು. ಸಾಮಂತನು ಕಟುಕಭಲ್ಲೂಕನ ಬಳಿಗೆ ಬಂದನು. ದುರ್ಮುಖರಾಜನು ಮಹಾ ಕೋಪದಿಂದ ಆ ಸಾಮಂತನ ಮೇಲೆ ಹಾರಲು, ಸಾಮಂತನು ಓಡಿಹೋಗ ತೊಡಗಿದನು.]

ದುರ್ಮುಖ ರಾಜನ ಸಾಮಂತನಾದ ಸೂರ್ಯಭೂಪತಿ ತನ್ನ ಕುದುರೆಯನ್ನು ನಿಲ್ಲಿಸಿ ಪ್ರತಿಭಟನೆ ತೋರದೆಯೇ ಕೋಟೆಯ ಕಡೆಗೆ ಓಡುತ್ತಿದ್ದನು. ದುರ್ಮುಖರಾಜನನ್ನು ಕಂಡಕೂಡಲೇ, ಅವನು ಹಿಂದಿರುಗಿ ನೋಡುವಷ್ಟೂ ಧೈರ್ಯವಿಲ್ಲದೆ ತೆರೆದ ಬಾಗಿಲಿನ ಕೋಟೆಯ ದ್ವಾರದ ಕಡೆಗೆ ಓಡುತ್ತಿರುವುದನ್ನು ನೋಡಿ ಅಲ್ಲಿದ್ದವರಿಗೆಲ್ಲ ಆಶ್ಚರ್ಯವಾಯಿತು. ಮುಖ್ಯವಾಗಿ ಅವನ ಸೇನಾ ನಾಯಕನೇ ತಿರಸ್ಕಾರದಿಂದ ಮೂಗು ಮುರಿದುಕೊಂಡನು. ಆದರೂ ಉಪಾಯವಿಲ್ಲದೆ, ಕರ್ತವ್ಯವನ್ನು ನೆನೆದು ತನ್ನೊಂದಿಗಿದ್ದ ಸೈನಿಕರಿಗೆ ತನ್ನನ್ನು ಅನುಸರಿಸುವಂತೆ ಕೈ ಸನ್ನೆ ತೋರಿಸಿ ಸಾಮಂತನ ಹಿಂದೆಯೇ ಕೋಟೆ ಗೋಡೆಯ ಕಡೆಗೆ, ತನ್ನ ಕುದುರೆಯನ್ನು ಓಡಿಸಿದನು. ಸೈನಿಕರೂ ಅವನನ್ನು ಅನುಸರಿಸಿದರು.

ಈ ಸಂದರ್ಭದಲ್ಲಿ ಆ ಸೇನಾ ನಾಯಕನೊಂದಿಗಿದ್ದ ಧೈರ್ಯಶಾಲಿಗಳಾದ ಇಬ್ಬರು ಸೈನಿಕರು ಅವನೊಂದಿಗೆ, "ಅಯ್ಯಾ, ಒಂದು ಮಾತು! ನಮ್ಮ ಮೇಲೆ ದಾಳಿಬಂದಿರುವ ಆ ಶತ್ರುಗಳು ಹತ್ತು ಮಂದಿ ಕೂಡಾ ಇಲ್ಲ. ಇಲ್ಲಿ ಹೊಸದಾಗಿ. ರಾಜನಾದ ಇಲ್ಲಿಯ ಸೂರ್ಯಭೂಪತಿ ಸಾಮಂತನನ್ನೂ,



ಹಳೆಯ ರಾಜ ದುರ್ಮುಖನನ್ನೂ ಒಬ್ಬರನ್ನೊಬ್ಬರು ಕಡಿದುಕೊಲ್ಲುವ ಹಾಗೆ ಬಿಟ್ಟುಬಿಡೋಣ. ಇಷ್ಟರೊಳಗೆ ನಾವು ಈ ಸ್ವಲ್ಪ ಮಂದಿ ಶತ್ರುಗಳನ್ನು ಸುತ್ತಲೂ ಮುತ್ತಿ ಹತ ಮಾಡಿಬಿಡಬಹುದು. ಆಮೇಲೆ ಹಳೆಯರಾಜನೂ ಇಲ್ಲ. ಹೊಸರಾಜನೂ ಇಲ್ಲ. ನೀವೇ ಉದಯಗಿರಿಯ ಮಹಾರಾಜ ರಾಗ ಬಹುದಲ್ಲ? ನಾವೆಲ್ಲಾ ನಿಮ್ಮವರೇ! ಈ ಒಳ್ಳೇ ಸಂದರ್ಭವನ್ನು ಜಾರಬಿಡಬಾರದಯ್ಯಾ. ಇಂಥ ಸಮಯ ಮತ್ತೆ ಬಾರದು." ಎಂದನು.

ಸೈನಿಕರ ಮಾತು ಕೇಳುತ್ತಿದ್ದಂತೆ, ಸೇನಾನಾಯಕನಿಗೆ ಹೊಸ ಆಶೆ ಹುಟ್ಟಿಕೊಂಡು ಬಂತು. ಅವನು ಕುದುರೆಯನ್ನು ಹಿಂದಕ್ಕೆ ತಿರುಗಿಸಿ, ಆನೆಯ ಮೇಲಿದ್ದ ಕಟುಕ ಭಲ್ಲೂಕ ಮತ್ತು ಇತರರನ್ನು ನೋಡಿದನು. ಕಟುಕ ಭಲ್ಲೂಕನು ಚಪಗೊಡಲಿಯನ್ನು ಮೇಲೆತ್ತಿ ಹಿಡಿದು, ಕುಣಿಸುತ್ತ, ಕಳ್ಳ ನಾಗಮಲ್ಲ ಮತ್ತು ಅವನ ಅನುಚರರಿಗೂ, ದುರ್ಮುಖರಾಜನ ಅಂಗರಕ್ಷಕರಿಗೂ ಹೀಗೆ ಹೇಳಿದನು: "ಎಲೆಲೋ! ಈ ದುರ್ಮುಖ ರಾಜನನ್ನು ನೋಡಿದಿರಾ! ಎಲ್ಲಿಲ್ಲದ ಸಾಹಸ ಅವನಿಗೆ ಬಂದು ಬಿಟ್ಟಿತು. ಅವನೊಬ್ಬನೇ ಆ ಸಾಮಂತನ ಬೆನ್ನು ಹತ್ತಿ ಓಡುತ್ತಾನೆ. ಬುದ್ಧಿಕೆಟ್ಟ ಆ ರಾಜನಿಗೆ ತನ್ನ ಪ್ರಾಣವೂ ದಕ್ಕದು. ರಾಜ್ಯವೂ ದಕ್ಕದು. ನಾವಾರೂ ಅವನ ಸಹಾಯಕ್ಕಿಲ್ಲದೆ, ಅಷ್ಟು ಮಂದಿ ಶತ್ರುಗಳ ನಡುವೆಗೆ ಅವನೊಬ್ಬನೇ ಹೋಗುವನೆಂದರೆ, ತನ್ನ ತಲೆಯನ್ನು ನನಗೆ ಕೊಡಲು ಇಷ್ಟವಿಲ್ಲದೆ. ಶತ್ರುಗಳ ನಡುವೆ ಸತ್ತುಬೀಳಲಿಕ್ಕಾಗಿಯೇ ಹೋಗುತ್ತಾನೆಂದಾಯಿತು. ಹಾಗಾಗ ಬಾರದು. ಅವನ ತಲೆ ನನಗೆ ಬೇಕೇಬೇಕು. ನಾವೆಲ್ಲಾ ಹೋಗಿ ಅಡ್ಡಗಟ್ಟಿದವರನ್ನು ಕಡಿಕಡಿದು ಹಾಕಿ ಆ ದುರ್ಮುಖನನ್ನು ಹಿಡಿಯೋಣ, ನಡೆಯಿರಿ!"

ಕರಡಿ ಕಟುಕರವನ ಮಾತು ಕೇಳಿದ ಕೂಡಲೇ ಉಗ್ರದಂಡ ರಾಕ್ಷಸನು ತನ್ನ ಕಲ್ಲಿನಗದೆಯನ್ನು ಎತ್ತಿ ಹಿಡಿದು ಪ್ರಳಯ ಭಯಂಕರ ಧ್ವನಿಯಿಂದ ಹೂಂಕರಿಸಿ, "ಎಲೆಲೋ, ಸಾಮಂತ ಭೂಪತಿಯ ಪುಡಿಪುಡಿ ಸೈನಿಕರೇ! ಜಾಗ್ರತೆ! ದುರ್ಮುಖರಾಜನಿಗೆ ಏನಾದರೂ ಕೂದಲು ಕೊಂಕಿತೆಂದರೆ, ನಿಮ್ಮಲ್ಲಿ ಯಾರಿಂದ ಹಾಗಾಯಿತೋ ಅವರೆಲ್ಲರೂ ನಜ್ಜುಗುಜ್ಜಾಗಿ ಸಾಯುವರು! ಜಾಗ್ರತೇ!" ಎಂದು ದಿಕ್ಕುಗಳು ಒಡೆಯುವಂತೆ ಕೂಗಿ ಹೇಳಿ ಕೋಟೆಯ ಕಡೆಗೆ ಹೊರಟನು.

ಭಯಂಕರಾಕಾರದ ಉಗ್ರದಂಡನು ನಡೆದು ಬರುವುದನ್ನು ನೋಡುತ್ತಲೇ, ತಾನು ರಾಜನಾಗಬೇಕೆಂಬ ಸೇನಾನಾಯಕನ ದುರಾಶೆ ಹೇಳ ಹೆಸರಿಲ್ಲದಂತೆ ಮರೆಯಾಯಿತು. ಮೊದಲು ಜೀವ ಉಳಿದರೆ ಸಾಕೆಂದು ಕೊಂಡವನ ಹಾಗೆ ತನ್ನ ಕುದುರೆಯನ್ನು ಹಿಂದಕ್ಕೆ ತಿರುಗಿಸಿ, ತನ ಸೈನಿಕರಿಗೆ ಕೇಳಿಸುವಂತೆ, "ಬೇಡಪ್ಪೋ! ನಾವು ಈ ರಾಕ್ಷಸರನ್ನೂ, ಕೊಡಲಿ ಹಿಡಿದ ಕರಡಿಗಳನ್ನೂ ಎದುರಿಸಿ ಬದುಕಲಾರೆವು!

ಕೋಟೆಯ ಗೋಡೆಗಳೇ ನಮ್ಮನ್ನು ಕಾಪಾಡಬೇಕು. ಬನ್ನಿ ! ಕೋಟೆಯೊಳಗೆ ಹೊಕ್ಕು ದ್ವಾರಗಳನ್ನು ಬಂಧಿಸಿಬಿಡೋಣ. ಓಡಿಬನ್ನಿ !" ಎಂದು ಕೂಗುತ್ತಾ ಓಡ ತೊಡಗಿದನು.

ತಮ್ಮ ನಾಯಕನು ಓಡಿ ಹೋಗುವುದನ್ನು ನೋಡಿದ ಕೂಡಲೇ ಅವನ ಸೈನಿಕರೆಲ್ಲಾ ಅವನನ್ನು ಅನುಸರಿಸಿದರು. ಅದನ್ನು ನೋಡಿ ಕಟುಕಕರಡಿಯವನು, ಮೊಂಡುಸೊಂಡಿಲಿನ ಆನೆಯ ನೆತ್ತಿಯ ಮೇಲೆ ಕುಳಿತಿದ್ದ ಆಟವಿಕನೊಂದಿಗೆ, "ಎಲೋ, ಆಟವಿಕಸೇವಕಾ ! ಕಾಡಿನಲ್ಲಿ ಹಕ್ಕಿಗಳನ್ನು ಹೊಡೆಯುವ ನಿನ್ನ ಬಾಣಬಿಡುವ ಅಭ್ಯಾಸವನ್ನು ಸ್ವಲ್ಪ ಹದ್ದಿನಲ್ಲಿಟ್ಟುಕೋ. ಓಡಿ ಹೋಗುವ ಸೈನಿಕರ ಮೇಲೆ ಬಾಣ ಹೊಡೆದು ಕೊಂದುಬಿಡಬೇಡ. ನಾವು ಆ ದುರ್ಮುಖಿರಾಜನನ್ನು ಕೆಲವು ಕ್ಷಣಗಳ ಮಾತಿಗೆ ಅವನ ಸಿಂಹಾಸನದ ಮೇಲೆ ಕುಳ್ಳಿರಿಸಿ, ಅವನ ತಲೆಯನ್ನು ತೆಗೆದುಕೊಂಡು ಕರಡಿ ಕೆಂಗಣ್ಣ ಮಹಾಮಾಂತ್ರಿಕರ ಬಳಿಗೆ ಹೋಗಬೇಕು. ಅಷ್ಟೇ ಹೊರತು ಪಾಪದ ಸೈನಿಕರನ್ನೆಲ್ಲಾ ಸಾಯಿಸುವ ಕೆಲಸಬೇಡ" ಎಂದನು.

ಆನೆಯ ಮೇಲೆ ಕುಳಿತಿದ್ದ ಕಟುಕಕರಡಿಯವನೂ, ಕಳ್ಳರನಾಯಕನೂ, ದುರ್ಮುಖಿನ ಅಂಗರಕ್ಷಕರೂ ಉಗ್ರದಂಡ ರಾಕ್ಷಸನ ಹಿಂದೆಯೇ ತಮ್ಮ ವಾಹನಗಳನ್ನು ಓಡಿಸಿಕೊಂಡು ಕೋಟೆಯ ದ್ವಾರದ ಬಳಿಗೆ ಹೋದರು

ಅಷ್ಟರೊಳಗೆ ಸಾಮಂತನ ಸೇನಾನಾಯಕನು ಕೆಲವು ಮಂದಿ ಸೈನಿಕರೊಂದಿಗೆ ಕೋಟೆಯೊಳಗೆ ಹೊಕ್ಕು ಆ ಕೂಡಲೇ ಬಾಗಿಲನ್ನು ಮುಚ್ಚಿಸಿಯೂ ಬಿಟ್ಟನು. ಇನ್ನೂ ಕೋಟೆಯ ದ್ವಾರದ ಹೊರಗೇ ಉಳಿದಿದ್ದ ಸೈನಿಕರು ಪ್ರಾಣಭಯದಿಂದ ಹಾಹಾಕಾರ ಮಾಡುತ್ತ ಕೋಟೆ ಗೋಡೆಯ ಬದಿಯಲ್ಲೇ ಚೆಲ್ಲಾ ಚೆದರಾಗಿ ಓಡಿ ಹೋದರು.



ಮುಂದಾಗಿ ಉಗ್ರದಂಡ ರಾಕ್ಷಸನು ಕೋಟೆಯ ದ್ವಾರವನ್ನು ಸಮೀಪಿಸಿ ಕಲ್ಲಿನ ಗದೆಯಿಂದ ಅದರ ಮೇಲೆ ಎರಡು ಸಾರಿ ಹೊಡೆದನು. ಆಗ ಸಿಡಿಲಿನಂತಹ ಶಬ್ದಗಳಾದುವೇ ಹೊರತು, ಬಾಗಿಲಿಗೆ ಏನೂ ಗಾಯ ಕೂಡಾ ಆಗಲಿಲ್ಲ. ಬಾಗಿಲಿನ ಗಟ್ಟಿತನವನ್ನು ನೋಡಿ ಉಗ್ರದಂಡನು ಆಶ್ಚರ್ಯ ಪಡುತ್ತ ಕಟುಕಭಲ್ಲೂಕನನ್ನು ನೋಡಿ "ನರಭಲ್ಲೂಕಾ ! ಈ ಸಾಮಂತನ ಸೇನಾನಿ ಎಷ್ಟು ಹೇಡಿಯೋ ಅದರ ಎರಡು ಪಾಲು ಮಾಯಗಾರನಾಗಿದ್ದಾನೆ ನೋಡಿದೆಯಾ ? ಈಗೇನು ಮಾಡೋಣ ? ದುರ್ಮುಖಿರಾಜನು ಒಬ್ಬಂಟಿಗನಾಗಿ ಕೋಟೆಯೊಳಗೆ ಅವನ ಶತ್ರುವಿನ ನಡುವೆ ಸಿಕ್ಕಿಕೊಂಡಿದ್ದಾನೆ. ಅವನ ಜೀವ ಹೇಗೆ ಹೋದರೂ, ಕೆಂಗಣ್ಣ ಮಾಂತ್ರಿಕರಿಗೆ ನೀನು ಸಮರ್ಪಿಸಬೇಕಾಗಿದೆಯಲ್ಲಾ ಅವನ ತಲೆ? ಅದಕ್ಕೇನು ದಾರಿಯೋ ನನಗೆ ತೋರುವುದಿಲ್ಲ. ಇನ್ನು ನಿನ್ನ ಗತಿ ಏನೋ !" ಎಂದನು.



ಉಗ್ರದಂಡ ರಾಕ್ಷಸನ ಬಾಯಿಯಿಂದ ಹೊಟ ಮಾತುಗಳನ್ನು ಕೇಳಿ ಕಟುಕಕರಡಿಯುವನಿಗೆ ಬಹಳ ಭಯವಾಗಿ ಎದೆಯಲ್ಲಿ ನಡುಕ ಉಂಟಾಯಿತು. ತಾನು ದುರ್ಮುಖಿರಾಜನ ತಲೆಯನ್ನು ತೆಗೆದುಕೊಂಡು ಹೋಗದಿದ್ದರೆ ಆ ಮಹಾ ಮಾಂತ್ರಿಕನು ತನ್ನನ್ನು ಸಾಯುವವರೆಗೂ ಕರಡಿಯಾಗಿರುವಂತೆ ಬಿಟ್ಟು ಬಿಟ್ಟರೆ ಏನು ಗತಿ? ಮನುಷ್ಯನಾಗಿ ಹುಟ್ಟಿ, ಕಡೆಗೆ ಕಾಡು ಕಾಡು ತಿರುಗುತ್ತ ಕರಡಿಬದುಕು ಬದುಕುವಂಥ ದುರ್ಗತಿ ಬಂದೀತಲ್ಲ? ಇದಕ್ಕಿಂತ ಹೆಚ್ಚಿನ ನರಕ ಯಾತನೆ ಯಾವುದಿದ್ದೀತು?

ಕಟುಕಭಲ್ಲೂಕನು ಹೀಗೆ ನೆನೆಯುತ್ತ, ಹೇಗಾದರೂ ಸರಿ, ದುರ್ಮುಖಿರಾಜನ ಪ್ರಾಣವನ್ನು ಕಾಪಾಡಲೇಬೇಕೆಂಬ ಆವೇಶದಲ್ಲಿ ತನ್ನ ಚಪಗೊಡಲಿಯನ್ನೆತ್ತಿ, "ಹೇ! ಭೈರವಾ!" ಎಂದು ಕೂಗಿ ಕೋಟೆಯ ದ್ವಾರದ ಮೇಲೆ ಬಲವಾಗಿ ಹೊಡೆದನು. ತಿರುಳುಮರದಿಂದ ಮಾಡಲ್ಪಟ್ಟ ಆ ಬಾಗಿಲಿನ ಮೇಲೆ ಕಬ್ಬಿಣದ ತಗಡನ್ನು ಹೊಡೆಯಲಾಗಿತ್ತು. ಕೊಡಲಿಯ ಪೆಟ್ಟಿಗೆ ಕಿಡಿಗಳೆದ್ದು, ಕೊಡಲಿ ಕೈ ತಪ್ಪಿ ಹಾರಿ ಬಿದ್ದಿತೇ ಹೊರತು ಬಾಗಿಲಿಗೆ ಯಾವ ಗಾಯವೂ ಆಗಲಿಲ್ಲ.

ಅದನ್ನು ನೋಡಿ ಆನೆಯ ಮೇಲೆ ಕುಳಿತಿದ್ದ ಅಟವಿಕನು, ಕೆಳಕ್ಕೆ ಹಾರಿ ಓಡಿಹೋಗಿ ಕೊಡಲಿಯನ್ನು ಎತ್ತಿಕೊಂಡು, "ಓ! ಭಲ್ಲೂಕದೊರೇ! ನೀವು ಹೀಗೆಲ್ಲಾ ಅವಸರಪಟ್ಟು ಆವೇಶಕ್ಕೆ ಬಿದ್ದು ಮಹಾ ಮಾಂತ್ರಿಕರ ಮಹತ್ವವಿರುವ ಈ ಕೊಡಲಿಯ ಶಕ್ತಿಗೆ ಅವಮಾನ ಬರಿಸಬಾರದು. ಈ ಕೋಟೆಯೊಳಗೆ ನಾವು ಹೋಗಬೇಕಾದರೆ, ನಾನು ಹೇಳುವ ಹಾಗೆ ಮಾಡಬೇಕು. ಈ ಬಾಗಿಲನ್ನು ಬೆಂಕಿ ಹಚ್ಚಿ ಸುಟ್ಟು ಬೂದಿ ಮಾಡುವುದೊಂದೇ ಮಾರ್ಗ. ಬೇರೆ ದಾರಿ ಇಲ್ಲ." ಎಂದನು.

"ಹೌದೆಲೇ ಅಟವಿಕನೇ. ನಿನ್ನ ಆಲೋಚನೆ ಚೆನ್ನಾಗೇ ಇದೆ. ಆದರೆ ಅಷ್ಟೆಲ್ಲಾ ಆಗುವುದರೊಳಗೆ ಸಾಮಂತರಾಜ ಸೂರ್ಯಭೂಪತಿ ದುರ್ಮುಖಿಯನ್ನು ಕೊಂದು ಹಾಕಿಬಿಟ್ಟರೆ ನನ್ನ ಗತಿ ಏನು ಹೇಳು. ನನಗೀಗ ಕೂಡಲೇ ನಡೆಯುವಂಥ ಉಪಾಯ ಬೇಕಾಗಿದೆ" ಎಂದನು ಕಟುಕಕರಡೀ ಮನುಷ್ಯ.

ಅಟವಿಕನು ತಲೆ ತುರಿಸುತ್ತ ಮೋರೆ ತಗ್ಗಿಸಿ ಕೊಡಲಿಯನ್ನು ಅದರ ಒಡೆಯನಿಗೆ ಕೊಟ್ಟನು.

"ಹೌದು ಹೌದು. ನರಭಲ್ಲೂಕನ ಮಾತು ನಿಜವೇ!" ಎನ್ನುತ್ತ ಉಗ್ರದಂಡ ರಾಕ್ಷಸನು ತನ್ನ ಕಲ್ಲಿನ ಗದೆಯನ್ನೆತ್ತಿ ನಾಲ್ಕೈದು ಅಡಿ ಹಿಂದಕ್ಕೆ ಹೋಗಿ ಕುಪ್ಪಳಿಸುತ್ತ ಬಂದು ಕೋಟೆಯ ದ್ವಾರದ ಮೇಲೆ ಬಲವಾದ ಒಂದು ಏಟನ್ನು ಕೊಟ್ಟನು.

ರಾಕ್ಷಸನ ಪ್ರಚಂಡವಾದ ಪೆಟ್ಟಿಗೆ ಕೋಟೆಯ ಬಾಗಿಲು ಒಡೆಯಲೇ ಇಲ್ಲ. ಆದರೆ ಮೊದಲೇ ಹಳೆಯದಾದುದರಿಂದ ಸೀಳು ಬಿಟ್ಟಿದ್ದ ಬಾಗಿಲಿನ ಮೇಲು ಭಾಗದ ಕೋಟೆ ಗೋಡೆಯ ಒಂದುಭಾಗವು

ಕಲ್ಲು ಮಣ್ಣುಗಳೊಂದಿಗೆ ಸ್ವಲ್ಪ ಜರಿದು ಬಿದ್ದಿತು. ಆಗ ಇಡೀ ಗೋಡೆಯೇ ಬೀಳುವುದೇನೋ ಎಂಬ ಭಯದಿಂದ ಉಗ್ರದಂಡನೂ ಉಳಿದವರೂ ಬೇಗ ಬೇಗನೇ ಹಿಂದಕ್ಕೆ ಓಡಿ ಹೋಗಿ ನಿಂತು, ತಿರುಗಿ ತಲೆಯೆತ್ತಿ ನೋಡಿದರು.



ಆಗ ಕೋಟೆಯ ಗೋಡೆಯ ಮೇಲೆ ಒಂದು ಅದ್ಭುತ ದೃಶ್ಯವು ಪ್ರತ್ಯಕ್ಷವಾಗಿತ್ತು. ಅದನ್ನು ನೋಡಿ ಎಲ್ಲರಿಗೂ ಆಶ್ಚರ್ಯವೂ ಭೀತಿಯೂ ಒಮ್ಮೆಗೇ ಉಂಟಾಯಿತು. ಕರ್ರಗಿನ ದುಸ್ತು ಧರಿಸಿದ ದೊಡ್ಡದೊಂದು ಕೋತಿಯ ಆಕಾರವು ಆ ಕೋಟೆಯ ಗೋಡೆಯ ಮೇಲೆ ಇತ್ತ ತಿರುಗಿ ಕುಳಿತು ಅವರನ್ನು ನೋಡುತ್ತಿತ್ತು, ಅದರ ಕೈಯಲ್ಲಿ ಉದ್ದವಾದೊಂದು ಮಂತ್ರದಂಡವೂ ಇದ್ದಿತು. ಅದರ ಹಿಡಿಯ ಮೇಲೆ ಕರಡಿಯ ತಲೆಯಿದ್ದು, ಅದರಲ್ಲೊಂದು ವಜ್ರವು ಕಣ್ಣಿಗೆ ಚುಚ್ಚುವಂತೆ ಹೊಳೆಯುತ್ತಿದ್ದಿತು.

ಆ ಕೋತಿಯ ರೂಪವನ್ನೂ. ಅದರ ಕೈಯಲ್ಲಿರುವ ಮಂತ್ರದಂಡವನ್ನೂ ನೋಡಿ ಕಟುಕಕರಡಿಯವನು, ಗಟ್ಟಿಯಾಗಿ ಹಲ್ಲುಕಡಿದು, ದೊಡ್ಡ ಕಂಠದಿಂದ, "ಏಲೋ, ಕೋತಿಕೊರವಾ ! ಯಾರು ನೀನು ? ಕೋತಿಯ ರೂಪದಲ್ಲಿರುವ ನೀನು ನಿಜಕ್ಕೂ ಕೋತಿಯೋ, ಯಾವುದಾದರೂ ಪಿಶಾಚಿಯೋ ? ಮಹಾಶಕ್ತಿಶಾಲಿಗಳಾದ ಕರಡಿ ಕೆಂಗಣ್ಣ ಮಾಂತ್ರಿಕರ ಮಂತ್ರದಂಡವು ನಿನ್ನ ಕೈಗೆ ಹೇಗೆ ಬಂತು ? ನಾನು ಅವರ ಪ್ರೀತಿಯ ಶಿಷ್ಯ. ನನ್ನ ಮುಂದೆ ನಿಜವನ್ನೇ ಹೇಳು" ಎಂದನು.

ಅವನ ಪ್ರಶ್ನೆಯನ್ನು ಕೇಳಿ ಕೋತಿ ರೂಪವು ಕರ್ಣಕಠೋರ ಧ್ವನಿಯಿಂದ ಕಿಚಕಿಚಾ ಎಂದು ಕೂಗಿ, "ಅರೆರೋ ! ಕೂಗುವವೀರಾ ! ಶಿಷ್ಯನಂತೆ, ಪ್ರೀತಿಯ ಶಿಷ್ಯ ! ಕರಡೀ ರೂಪದಲ್ಲಿರುವ ನೀನು ನಿಜವಾದ ಕರಡಿಯೋ ಅಥವಾ ಕರಡಿ ಪಿಶಾಚಿಯೋ ?" ಎಂದು ಕೇಳಿತು.

ಕಟುಕಕರಡಿಯವನು ಆ ಕೋತಿ ರೂಪದ ಗೇಲಿಯನ್ನು ಸಹಿಸದೆ ಅತ್ಯುಗ್ರನಾಗಿ ಅದರ ಮೇಲೆ ಕೊಡಲಿಯನ್ನು ಎಸೆಯಲು ನೋಡಿದನು. ಆಗ ಉಗ್ರದಂಡ ರಾಕ್ಷಸನು ಅವನ ಕೈಹಿಡಿದು ತಡೆದು, ಮೆಲ್ಲನೆಯಿಂದ, "ಕಟುಕಭಲ್ಲೂಕಾ ! ಅವಸರಪಡಬೇಡ ! ಕೆಲಸ ಕೆಟ್ಟೀತು. ನಿನ್ನ ಗುರು ಆ ಕರಡಿ ಕೆಂಗಣ್ಣ ಮಾಂತ್ರಿಕರು ಯಾವುದೋ ಅಪಾಯಕ್ಕೆ ಸಿಕ್ಕಿಬಿದ್ದಿರುವಂತೆ ನನಗೆ ಅನುಮಾನವಾಗಿದೆ. ಮೊದಲು ಈ ಕೋತಿ ಪಿಶಾಚಿಯನ್ನು ಒಳಿತಾಗಿ ಮಾತಾಡಿಸಿ ಏನು ನಡೆಯಿತೆಂಬುದನ್ನು ತಿಳಿದುಕೊಳ್ಳೋಣ" ಎಂದನು.

ಉಗ್ರದಂಡನು ಹಾಗೆ ಹೇಳುತ್ತಿದ್ದಾಗ, ಆಟವಿಕ ಮನುಷ್ಯನು ಮರೆಯಲ್ಲಿದ್ದು ಒಂದು ಬಾಣವನ್ನು ಆ ಕೋತಿಗೆ ಗುರಿಯಿಟ್ಟು ಪ್ರಯೋಗಿಸಿಬಿಟ್ಟನು. ರಿವ್ವನೆ ಹೋಗಿ ಕೋತಿಗೆ ತಾಗಿತು ಆ ಬಾಣ. ಆದರೆ ಚುರುಕಾದ ಆ ಕೋತಿ ತನ್ನೆಡೆಗೆ ಬರುತ್ತಿದ್ದ ಬಾಣವನು



ಎಡಗೈಯಿಂದ ಗಪ್ಪನೆ ಹಿಡಿದು. ಇದ್ದಲ್ಲಿಂದ ಸ್ವಲ್ಪವೂ ಕದಲದೆ, ಬಲಗೈಯಲ್ಲಿದ್ದ ಮಂತ್ರದಂಡವನ್ನು ಮೇಲಕ್ಕೆತ್ತಿ "ಎಲೋ ಶುಂಠಾಗ್ರೇಸರರೇ! ನನ್ನ ಶಕ್ತಿ ಎಂಥಾದ್ದೆಂದು ಈಗಾದರೂ ಗೊತ್ತಾಯಿತೇನ್ರೋ? ನಾನು ಸಾಧಾರಣ ಮರ್ಕಟನಲ್ಲ; ಮಾಯಾ ಮರ್ಕಟ! ಜಾಗ್ರತೆ!" ಎಂದು ಕೀಚು ದನಿಯಿಂದ ಜೋರಾಗಿ ನಗತೊಡಗಿತು.

ಆ ಕೋತಿಯ ಕೀಚು ಕೀಚು ಕಿರುಚಾಟವನ್ನು ಕೇಳಲಾಗದೆ ಕಟುಕಭಲ್ಲೂಕನು ತನ್ನ ಎರಡು ಕಿವಿಗಳನ್ನು ಮುಚ್ಚಿಕೊಂಡು, ಉಗ್ರದಂಡ ರಾಕ್ಷಸನನ್ನು ನೋಡಿ, "ಉಗ್ರದಂಡಾ! ಇನ್ನು ಈ ಹಾಳು ಮರ್ಕಟದೊಂದಿಗೆ ಮಾತು ಬೆಳೆಸಿ ಪ್ರಯೋಜನವಿಲ್ಲ, ಕೋಟೆಯೊಳಗೆ ದುರ್ಮುಖರಾಜನು ಇನ್ನೂ ಬದುಕಿರುವನೋ ಇಲ್ಲವೋ ಗೊತ್ತಾಗಲಿಲ್ಲ. ಸಿಕ್ಕಿ ಬಿದ್ದ ಒಬ್ಬನೇ ಒಬ್ಬನನ್ನು ಕೊಲ್ಲಲು ಆ ಸಾಮಂತನಿಗೆ ಎಷ್ಟು ಹೊತ್ತು ಹಿಡಿದೀತು? ಈ ಕೋಟೆಯ ಬಾಗಿಲನ್ನು ಒಡೆಯಲು ಸಾಧ್ಯವಾಗದೇ ಹೋದರೆ ಕೋಟೆಯ ಗೋಡೆಯ ಮೇಲಾದರೂ ಹತ್ತಿ ನಾವು ಒಳಗೆ ಪ್ರವೇಶಿಸಲೇಬೇಕು. ಅದಕ್ಕೇನು ಮಾರ್ಗವೋ ಯಾರಾದರೂ ಹೇಳಿರಪ್ಪಾ!" ಎಂದನು.

ಅವನ ಮಾತು ಕೇಳಿ ಉಗ್ರದಂಡರಾಕ್ಷಸನು ಮುಖದಲ್ಲಿ ಆಶ್ಚರ್ಯವನ್ನು ವ್ಯಕ್ತಪಡಿಸುತ್ತ, ಕಟುಕಭಲ್ಲೂಕನನ್ನು ನೋಡಿ, "ನರಭಲ್ಲೂಕಾ! ನಿನಗೆ ನಡೆದ ಸಂಗತಿ ಸಂದರ್ಭಗಳು ಸರಿಯಾಗಿ ಅರ್ಥವಾದಂತೆಯೇ ಇಲ್ಲ. ಈ ಮಾಯಾ ಮರ್ಕಟ ಎಂದುಕೊಳ್ಳುವ ದುರಾತ್ಮನು, ಕರಡಿ ಕೆಂಗಣ್ಣ ಮಾಂತ್ರಿಕರ ಮಂತ್ರದಂಡವನ್ನು ವಶಪಡಿಸಿಕೊಂಡನೆಂದರೆ, ನಿಶ್ಚಯವಾಗಿಯೂ ಆ ಮಾಂತ್ರಿಕರು ಜೀವದಿಂದಿರಲಿಕ್ಕಿಲ್ಲ. ಅಂತಹ ಸ್ಥಿತಿಯಲ್ಲಿ ನೀನು ದುರ್ಮುಖರಾಜನಿಗಾಗಿ ಅವಸರಪಡುತ್ತ ಅಗತ್ಯವಿಲ್ಲದ ಕಷ್ಟಗಳಿಗೆ ಸಿಕ್ಕಿಕೊಳ್ಳಲು ನೋಡುವೆಯಲ್ಲಾ? ನಡೆ. ನಾವಿಬ್ಬರೂ ಅರಣ್ಯದೊಳಗಿನ ಯಾವುದಾದರೂ ಪ್ರಶಸ್ತವಾದ ಗುಡ್ಡದಗವಿಗಳಲ್ಲಿ ವಾಸಮಾಡೋಣ. ಮುಂದಿನ ಆಲೋಚನೆ ಮುಂದೆ." ಎಂದನು.

"ಆಹಾ! ಮಹಾರಾಕ್ಷಸ ಪ್ರಭುಗಳು ಅತ್ಯುತ್ತಮವಾದ ಸಲಹೆ ಹೇಳಿದಿರಿ!" ಎಂದು ಕಳ್ಳರ ನಾಯಕ ನಾಗಮಲ್ಲನು ಆನೆಯ ಮೇಲಿನಿಂದ ಕೆಳಗೆಹಾರಿ, ತನ್ನ ಅನುಚರರಿಬ್ಬರನ್ನೂ, ಅಂಗರಕ್ಷಕರನ್ನೂ ಆನೆಯಿಂದ ಇಳಿಯಲು ಹೇಳಿ, "ಉಗ್ರದಂಡ ಪ್ರಭುಗಳ ಆಲೋಚನೆ ಹೇಗಿದೆ ಕೇಳಿದಿರಪ್ಪ? ನಾವುಗಳು ಒಂದಾಗಿ ಅರಣ್ಯದಲ್ಲಿ ಗುಂಪು ಕಟ್ಟಿಕೊಂಡಿದ್ದರೆ, ನಮ್ಮ ದಾರಿ ದೋಚುವ ಕೆಲಸವನ್ನು ತಡೆಯುವವರು ಈ ಭೂಪ್ರಪಂಚದಲ್ಲಿ ಯಾರಿದ್ದಾರು? ಅದೇ ಸರಿ!" ಎಂದನು ಉತ್ಸಾಹದಿಂದ.

ಕಟುಕಕರಡಿಯವನು ಕೋಪದಿಂದ ಕಣ್ಣು ತಿರುಗಿಸುತ್ತ ತನ್ನ ಸೇವಕ ಆಟವಿಕನನ್ನು ನೋಡಿ, "ಎಲೋ, ಆಟವಿಕ ಸೇವಕಾ! ಈ ಕಳ್ಳ ತಪ್ಪಿಸಿಕೊಂಡು ಹೋಗ

ದಂತೆ ಬಿಲ್ಲಿಗೆ ಬಾಣ ಹೂಡಿ 'ಗುರಿ ಹಿಡಿ !" ಎಂದು ಉಳಿದವರನ್ನು ನೋಡಿ, "ನಾನೀಗ ಮಹಾಮಾಂತ್ರಿಕ ಕರಡಿ ಕಿಂಗಣ್ಣರಕಡೆಗೆ ಹೊರಡುತ್ತೇನೆ. ಅವರ ಜತೆಯಲ್ಲಿ ಮಹಾಶೂರನಾದ ಕಾಳೀವರ್ಮನೆಂಬ ಯುವಕನೂ ಇದ್ದ. ಅವರಿಬ್ಬರೂ ಏನಾದರೆಂದು ಹುಡುಕಲು ನನ್ನೊಂದಿಗೆ ಯಾರುಯಾರು ಬರುವಿರಿ? ಕೈಯೆತ್ತಿರಿ" ಎಂದನು.

ಉಗ್ರದಂಡರಾಕ್ಷಸನ ಹೊರತು ಉಳಿದೆಲ್ಲರೂ ಅಂಗೀಕಾರಸೂಚಕವಾಗಿ ಕೈಗಳನ್ನು ಎತ್ತಿದರು. ಆಟವಿಕನು ಏನೋ ಅನುಮಾನದಿಂದ, "ಭಲ್ಲೂಕ ದೊರೇ ! ಈ ಕಳ್ಳ ನಾಗಮಲ್ಲನೂ ಅವನ ಸ್ನೇಹಿತರೂ ನಮ್ಮೊಡನೆ ಬರುವುದಾಗಿ ಹೇಳುತ್ತಾರೆ. ಅವರನ್ನು ನಂಬುವುದು ಒಳ್ಳೆಯದೆನ್ನುವಿರಾ ?" ಎಂದು ಕೇಳಿದನು.

"ಅವರು ನಂಬುಗೆಗೆ ತಕ್ಕವರಲ್ಲವೆಂದಾದರೆ ಇಲ್ಲಿಯೇ ತಲೆಗಳನ್ನು ತರಿದು ಹಾಕುತ್ತೇನೆ. ಅಯ್ಯಾ, ಉಗ್ರದಂಡಾ ! ನಿನ್ನ ಸಮಾಚಾರವೇನು ? ಕರಡಿ ಕಿಂಗಣ್ಣ ಮಹಾಮಾಂತ್ರಿಕರೊಂದಿಗೆ ಏನೋ ಕೆಲಸ ವಿರುವುದಾಗಿ ಹೇಳಿದೆಯಲ್ಲಾ ?" ಎಂದು ಕೇಳಿದನು ಕಟುಕ ಭಲ್ಲೂಕ.

"ಆ ಮಾಂತ್ರಿಕ ಮಹಾಶಯರು ಸಜೀವಿಯಾಗಿದ್ದರೆ ತಾನೇ ನನಗೆ ಕೆಲಸವಿದ್ದೀತು ?" ಎಂದನು ಉಗ್ರದಂಡರಾಕ್ಷಸ,

ಅದೇ ಹೊತ್ತಿಗೆ ಮಾಯಾಮರ್ಕಟವು ಕೋಟೆಯ ಗೋಡೆಯ ಮೇಲೆ ಕೀಚ. ಕೀಚವೆಂದು ಕೆಟ್ಟ ಧ್ವನಿಯಿಂದ ಕೂಗಿ, "ಏನಿದೂ ! ಈ ಕೋಟೆಯೊಳಗೆ ನಡೆಯುವುದು ಯುದ್ಧವೋ ಕಣ್ಣು ಮುಚ್ಚಾಲೆಯಾಟವೋ ? ಸೈನಿಕರು ಎರಡು ಭಾಗಗಳಾಗಿ ಸೀಳಿ ಹೋಗಿ, ಕೆಲವರು ಹಳೆಯ ರಾಜ ದುರ್ಮುಖನನ್ನೂ, ಮತ್ತೆ ಕೆಲವರು ಸಾಮಂತ ಸೂರ್ಯಭೂಪತಿಯನ್ನೂ ಗೆಲ್ಲಿಸಬೇಕೆಂದು ನೋಡುತಿದ್ದಾರೆ.



ಈ ಹೇಡಿ ಗಂಡುಗಳು ಮುಖಾಮುಖೀ ಯುದ್ಧ ಮಾಡುವುದನ್ನು ಬಿಟ್ಟು, ಕಂಬಗಳ ಹಿಂದೆಯೂ, ಗೋಡೆಗಳ ಮರೆಯಲ್ಲಿಯೂ ಹೊಂಚಿ ಅಡಗಿ ಎಂಥದೋ ಆಟ ನಡೆಸುತ್ತಿದ್ದಾರೆ ! ಫೂಫೂ ! ಶುದ್ಧ ಪುಕ್ಕರು !" ಎಂದಿತು.

ಆ ಮಾತುಗಳನ್ನು ಕೇಳಿ ಕಟುಕಭಲ್ಲೂಕನು ಸ್ವಲ್ಪ ಮಟ್ಟಿಗೆ ಸ್ತಿಮಿತಕ್ಕೆ ಬಂದು. "ಉಗ್ರದಂಡಾ ! ಕೇಳಿದೆಯಷ್ಟೇ ಹುಚ್ಚು ಕೋತಿಯ ಮಾತು ? ಆ ದುರ್ಮುಖರಾಜನು ಜೀವದೊಂದಿಗೆ ನನ್ನ ಕೈಗೆ ಸಿಗುವನೆಂದು ಕಾಣುತ್ತದೆ. ಅಬ್ಬ ! ಈ ಹಾಳಾದ ಕರಡೀ ರೂಪದಿಂದ ನನಗೆ ಬೇಗದಲ್ಲಿ ಬಿಡುಗಡೆಯಾಗುತ್ತದೆ" ಎಂದನು.

ಉಗ್ರದಂಡ ರಾಕ್ಷಸನು ತಿರಸ್ಕಾರ ಸೂಚಿಸುವಂತೆ ಕಲ್ಲಿನ ಗದೆಯನ್ನು ನೆಲಕ್ಕೆ ಹೊಡೆದು, "ಎಲೋ ಕಟುಕಭಲ್ಲೂಕಾ ! ನೀನು ಇನ್ನೂ ಹಳೆಯ ಹಾಡೇ ಹಾಡಿಕೊಂಡಿರುವೆ. ಕರಡಿ ಕಿಂಗಣ್ಣ ಮಾಂತ್ರಿಕನು

ಜೀವದೊಂದಿಗಿರುವಾಗ ಅವನ ಮಂತ್ರ ದಂಡ ಈ ಕೋತಿಯ ಕೈಗೆ ಬರಲು ಸಾಧ್ಯವೆ? ಇದನ್ನು ಯೋಚಿಸಿದೆಯಾ?" ಎಂದು ಚಪ್ಪಾಳೆತಟ್ಟಿ ಮಾಯಾಮರ್ಕಟವನ್ನು ನೋಡಿ, "ಎಲೋ! ಮರ್ಕಟನೇ! ನೀನೇನೋ ಕರಡಿ ಕೆಂಗಣ್ಣರ ಮಂತ್ರ ದಂಡವನ್ನು ಹಿಡಿದಿರುವೆ! ಚೆನ್ನಾಗೇ ಇದೆ. ಆತನ ಶವವನ್ನು ಏನು ಮಾಡಿದೆ?" ಎಂದು ಕೇಳಿದನು.

"ಆತನ ಶವವನ್ನು ತುಂಡು ತುಂಡು ಮಾಡಿ ಕಾಗೆಗಳಿಗೂ ಹದ್ದುಗಳಿಗೂ ಹಾಕಿಬಿಟ್ಟೆ. ಆದರೆ ಆ ಪಕ್ಷಿಗಳನ್ನು ಸಮೀಪಕ್ಕೆ ಬರಲು ಬಿಡದಂತೆ ಕಾಳೀವರ್ಮನೆಂಬ ಅವನ ಶಿಷ್ಯನು ಕಾವಲುಕಾಯುತ್ತಿದ್ದಾನೆ" ಎಂದು ಹೇಳಿ, ಮಂತ್ರದಂಡವನ್ನು ಗೋಡೆಯ ಮೇಲೆ ಉದ್ದಕ್ಕೆ ಆನಿಸಿಟ್ಟು, ಅದರ ಮೇಲೆ ಏರಿ ದೂರಕ್ಕೆ ದೃಷ್ಟಿ ಹಾಯಿಸುತ್ತ, "ಅರೆ! ಅರೆ! ಆ ಕರಡಿಕೆಂಗಣ್ಣ ಮಾಂತ್ರಿಕ ಯಾವ ಸಂಜೀವಿನೀ ವಿದ್ಯೆಯಿಂದಲೋ ಮತ್ತೆ ಬದುಕಿದ್ದಾನೇನು? ಕೋಣನ ಮೇಲೆ ಕುಳಿತುಕೊಂಡು ಬರುತ್ತಿದ್ದಾನೆ! ಅವನ ಪಕ್ಕದಲ್ಲಿ ಕುದುರೇ ಮೇಲೆ ಆ ಕಾಳೀವರ್ಮ ಎಂಬವನೂ ಬರುತ್ತಾನೆ! ಅವರನ್ನು ಹಿಡಿಯಲು ಚಂದ್ರಶಿಲಾ ನಗರದ ರಾಜ ಜಿತಕೇತುವಿನ ಮಂತ್ರಿ ಸೈನ್ಯದೊಂದಿಗೆ ಆಕಡೆಯಿಂದ ಬರುತ್ತಿದ್ದಾನೆ. ಬರಲಿ ಬರಲಿ! ಆಹಾ! ಈ ದಿನ ಭಲೇ ಹಬ್ಬ ನನ್ನ ಕಣ್ಣಿಗೆ. ಅವರಿಬ್ಬರ ಶಿರಚ್ಛೇದಗಳನ್ನು ಕಣ್ಣಾರೆ ನೋಡಿದ ಹೊರತು ನಾನು ಇಲ್ಲಿಂದ ಕದಲಲಾರೆ." ಎಂದಿತು.

ಮಾಯಾ ಮರ್ಕಟದ ಮಾತನ್ನು ಕೇಳಿ ಕಟುಕ ಭಲ್ಲೂಕನು, "ಹೇ! ಭೈರವಾ!" ಎಂದು ಗಟ್ಟಿಯಾಗಿ ಕೂಗಿ, "ಎಲೋ ಸುಡುಗಾಡು ಮರ್ಕಟನೇ! ಏನು ಬೊಗಳುವೆಯೋ? ನಿನಗೇನಾದರೂ ಹುಚ್ಚೋ ಅಥವಾ ನಮಗೇ ಹುಚ್ಚು ಹಿಡಿಸಲು ನೋಡುವೆಯಾ?" ಎಂದನು.

ಅವನ ಮಾತು ಮುಗಿಯುವುದರೊಳಗೆ ವೇಗವಾಗಿ ಕುದುರೆಯ ಮೇಲೆ ಮುಂದೆ ಕಾಳೀವರ್ಮನೂ, ಅವನ ಹಿಂದೆ ಕೋಣದ ಮೇಲೆ ಕರಡಿ ಕೆಂಗಣ್ಣ ಮಾಂತ್ರಿಕನೂ ಅಲ್ಲಿಗೆ ಬಂದು, ಕೋಟೆಯ ಗೋಡೆಯ ಮೇಲಿರುವ ಮಾಯಾ ಮರ್ಕಟವನ್ನು ನೋಡಿದ ಕೂಡಲೇ, "ಕಟುಕರ ನಾಯಕ ಭಲ್ಲೂಕಾ! ಮಂತ್ರ ದಂಡವನ್ನು ಅಪಹರಿಸಿದ ಈ ಮಾಯಾ ಮರ್ಕಟವನ್ನು ಜೀವದೊಂದಿಗೆ ಬಿಡಕೂಡದು!" ಎಂದು ಕೂಗಿ ಹೇಳಿದರು.

ಮರುಕ್ಷಣದಲ್ಲಿ ಮರ್ಕಟನು ಕಿಚಕಿಚನೆ ನಗುವನ್ನು ಹಾರಿಸುತ್ತ, ಛಂಗನೆ ಕೋಟೆಯ ಒಳ ಭಾಗಕ್ಕೆ ಹಾರಿಬಿಟ್ಟನು. —(ಇನ್ನೂ ಇದೆ)

